Koravanji

# ಕೊರವಂಜಿ

ಜನವರಿ ೧೯೫೨



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ಕುಮಾರ ಕೆಂಪಯ್ಯ
ಶ್ರೀ॥ ಪಾಟಾಳಿ
ಶ್ರೀ॥ ಸತ್ಯಬೋಧ
ಶ್ರೀ॥ ನಾಗ
ಶ್ರೀ॥ ಯಜ್ಞಪಶು
ಶ್ರೀ॥ ಎ. ಎಸ್. ರಾಮಕೃಷ್ಣ
ಶ್ರೀ॥ ಹಾ. ರಾ.
ಶ್ರೀಮತಿ ಸುನಂದಮ್ಮ
ಶ್ರೀ॥ ನಾ. ಕ.
ಶ್ರೀ॥ ಬುಳ್ಳ
ಶ್ರೀ॥ ದಾಶರಥಿ ದೀಕ್ಷಿತ್
ಶ್ರೀ॥ ರೇವಣ್ಣ
ಶ್ರೀ॥ ಕಾಮತ್
ಶ್ರೀ॥ ತಿರು. ಶ್ರೀರಂಗ

ಇತ್ಯಾದಿ, ಇತ್ಯಾದಿ.

ತಿಳನಗೆಯ ಮಾಸಪತ್ರಿಕೆ



ಮಲೇರಿಯಾ

ರೋಗದಿ ನಾನು

ಸಾಯುವೆ

ನೆಂದಿದ್ದೆ......

ಕಡೆಗೆ

"ಪಾಲುಡ್ರಿನ್"

ನನ್ನನ್ನು ಉಳಿಸಿತು



ಕಳೆದ ಸಲ ವ್ಯಾಪಾರಕ್ಕಾಗಿ ಹಳ್ಳಿಯ ಕಡೆ ಹೋಗಿದ್ದಾಗ, ಮಲೇರಿಯಾ ನನ್ನನ್ನು ಮುಗಿಬೀಳುತ್ತಲಿದ್ದಿತು. ಎಷ್ಟು ದಿನವಾದರೂ ಜ್ವರ ಬಿಡಲೇ ಇಲ್ಲ. ಸಹಿಸಲಾರದಷ್ಟು ನರಳಾಟ! ಉಳಿಯೆನೆಂಬ ಶಂಕೆ ಹೆಚ್ಚಿತು. ಕಡೆಗೆ, ನನ್ನ ಸ್ನೇಹಿತನೊಬ್ಬನ ಹೇಳಿಕೆಯ ಮೇರೆಗೆ, ದಿನಕ್ಕೊಂದರಂತೆ 'ಪಾಲುಡ್ರಿನ್' ಮಾತ್ರೆಗಳನ್ನು ಪ್ರತಿದಿನವೂ ತೆಗೆದುಕೊಳ್ಳಲಾರಂಭಿಸಿದೆನು. ಮೂರೇ ದಿನಗಳಲ್ಲಿ ಜ್ವರದ ಹುಟ್ಟಡಗಿತು. ನನ್ನಲ್ಲಿ ನವಚೈತನ್ಯವು ತಲೆದೋರಿತು. ಅಂದು ಮೊದಲು ಪ್ರತಿ ಭಾನುವಾರ ಊಟದ ನಂತರ ಒಂದೊಂದು ಮಾತ್ರೆಯಂತೆ 'ಪಾಲುಡ್ರಿನ್' ಸೇವಿಸುತ್ತಿದ್ದೇನೆ. ಈಗಲಾದರೋ, ಮಲೇರಿಯಾಕ್ಕೆ ನಾನೆಂದರೆ ಭಯ.



ಪಾಲುಡ್ರಿನ್*

ಟ್ರೇಡ್ ಮಾರ್ಕ್

ಮಲೇರಿಯಾಕ್ಕೆ ಅದ್ಭುತವಾದ ಸಿದ್ಧೌಷಧ

* ಅಡಿಗೆ ಒಂದು ಮಾತ್ರೆ

ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ (ಇಂಡಿಯ) ಲಿಮಿಟೆಡ್




ಸಂಪುಟ ೧೦ | ಜನವರಿ ೧೯೫೨ | ಸಂಚಿಕೆ ೧೦

## ಕು ಹ ಕಿ ಡಿ ಗ ಳು

★ ★

ಪಂ|| ನೆಹ್ರೂ ಅವರು ಭಾಷಣಮಾಡಿ ಹೊರಟು ಹೋದಕೂಡಲೇ, ಎಲ್ಲಾ ರಸ್ತೆಗಳಲ್ಲೂ 'ಕಾಂಗ್ರೆಸಿಗೇ ಓಟು ಕೊಡಿ' ಎಂಬ ಧ್ವನಿ ಹೊರಟಿತಂತೆ.

* * *

"ರಾಜಾಜಿಯವರು ಸನ್ಯಾಸಿ" ಎಂಬರ್ಥ ಬರುವ ಹೇಳಿಕೆಯನ್ನು ರಾಜಾಜಿಯವರು ಕಂಡಕೂಡಲೆ ಖಂಡಿಸಿ ಹೇಳಿಕೆ ಕೊಟ್ಟಿದ್ದಾರೆ.

ಆ ಸ್ಥಿತಿಗೆ ಹೋಗಲು ನಾನಿನ್ನೂ ಸಿದ್ಧನಾಗಿಲ್ಲ ಅಂತ.

* * *

"ವನಮಹೋತ್ಸವ"—"ಹೆಚ್ಚು ಆಹಾರ ಬೆಳೆಯಿರಿ" ಮುಂತಾದ ಸುಪ್ರಸಿದ್ಧ ಕಥೆಗಳನ್ನು ಬರೆದ ಶ್ರೀ ಮುನ್ಷಿಯವರು ಹೊಸ ಕತೆಯನ್ನು ಹೊಸ ವರ್ಷಕ್ಕೆ ಇತ್ತಿದಾರಂತೆ—"ಒಳ್ಳೆಯ ಕುದುರೆಗಳನ್ನು ಸಲಹಿ" ಎಂಬ.

—ಬಿಳಿ ಕುದುರೆ ಬಂದೀತೇ? ಅಂತ ಜನ ಕಾದು ಕುಳಿತಿದ್ದಾರೆ ಅಲ್ಲವೇ?

* * *

ನವೀನ ಶ್ರೀಮಂತರ ಮನೆ ಕಾಫಿಗೆ ಮೂರು ವಾಸನೆ ಇರುತ್ತದೆಯಂತೆ

— ಬೆಳ್ಳಿ ಲೋಟಕ್ಕನುಗುಣವಾಗಿ ಗಂಧ, ಯೂಡಿಕೊಲೋನ್ ಅಥವಾ ನಾಪ್ತಲೀನ್.

* * *

ಒಬ್ಬ ಉಮೇದುವಾರರು ಸೈಕಲ್ ಕೊಡ್ತೀನಿ ಅಂದಾಗ ಸ್ಪರ್ಧಿಗಳು ಪಾನ ನಿರೋಧ ತೆಗಿಸ್ತೀನಿ ಅಂತ ಉತ್ತರ ಕೊಟ್ಟರಂತೆ.

* * *

ಕೆಂಪು ಕಮ್ಯೂನಿಸ್ಟುಗಳೇ ವಾಸಿ! ಚುನಾವಣಾ ಹೆಸರಿನಲ್ಲಿ ದೇವರ ಕಾಲಕ್ಷೇಪ ಸಾಮೂಹಿಕವಾಗಿ ನಡೆಸುತ್ತಿದ್ದಾರಂತೆ.

- ದೇವರ ಹೆಸರು ದೊಡ್ಡಪ್ಪ ಸ್ಟಾಲಿನ್‌ಗೆ ಕೇಳಿಸಿದರೆ ಇವರುಗಳ ಗತಿ?

* * *

"ಪಂಗನಾಮ" ನಾಟಕದಲ್ಲಿ ಪಂಗದ ಪಕ್ಕದಲ್ಲಿ ಮೂರು ನಾಮ ಎಳೆದಿರುವುದು "ಕರಕಾ"ರವರ ಅವಗಾಹನೆಗೆ ಬಿದ್ದಂತೆ ಕಾಣಬಂದಿಲ್ಲ ಅಲ್ಲವೇ?

* * *

ನಮ್ಮೂರಿನಲ್ಲಿ ಪ್ರಖ್ಯಾತರಾದ ವೆಸ್ಟ್ ಇಂಡೀಸ್‌ರವರು ಕಡೇಗೆ ಆಸ್ಟ್ರೇಲಿಯಾದಲ್ಲಿ ಒಂದು ಟೆಸ್ಟ್ ಗೆದ್ದರಂತೆ.

—ಎಂಟು ವರ್ಷಕ್ಕೆ ನಮ್ಮ ಹುಡುಗ ದಂಟು.

* * *

ಪಾರಿವಾಳ ಹಾರಿಸೋದು ಬಲು ಖುಷಿಯ ಕೆಲಸ. (ಜೂಜುಗಾರನ ಹೇಳಿಕೆ)

—ಅಲ್ಲವೇ! ಟ್ರೂಮನ್ ಸ್ಟಾಲಿನ್, ಕೂಡ ಬಿಳೀ ಪಾರಿವಾಳ ಹಾರಿಸ್ತೀವಿ ಅಂತ ತಾವೇ ಹಾರಾಡುಲ್ಲವೇ?

* * *

ಪಂ|| ನೆಹ್ರೂ ಅವರ ಭಾಷಣಕ್ಕೆ ಮಿಕ್ಕೆಲ್ಲಾ ಪಾರ್ಟಿಯ ಮುಖಂಡರು ಹೋಗಿದ್ದರಂತೆ.

—ಚುನಾವಣಾ ಭಾಷಣದ ಬಲೆ ಹೇಗೆ ಬೀಸಬೇಕು ಅಂತ ಕಲಿತು ಕೊಳ್ಳಲಿಕ್ಕೆ.

* * *

ಮಂತ್ರಿಗಳು ಆಟದ ಸಾಮಾನುಗಳೊಡನೆ ಆಡಬೇಕು. (ಮೋದಿಯವರ ಹೇಳಿಕೆ.)

— ಏಕೆ ಸ್ವಾಮಿ! ಕಛೇರೀಲಿ ಇನ್ನೇನು ತಾನೇ ಮಾಡ್ತಾರೆ?

* * *

ಓಮಂದೂರರವರು ಪ್ರತಿ ಒಂದು ಊರಿನಲ್ಲೂ ಶಿವಸಮಾಜ ಏರ್ಪಡಿಸಬೇಕೆಂದಿರುವರು.

—ನ್ಯಾಯ! ಜೀವನಾತಿ ಕಳಕೊಂಡವರೆಲ್ಲಾ ಶಿವ ಶಿವಾ ಅಂತ ಸೇರಿಕೋಬಹುದು.

---

# ಉರಿಗಾಳು

ಪರೀಕ್ಷೆಗಳಲ್ಲಿ ಒಬ್ಬರೂ ಸೋಲದಿದ್ದರೆ, ಗೆದ್ದವರಿಗೆ ನೌಕರಿ ಕೊಡುವವರಾರು?—ಎಂದು ವಿದ್ಯಾಧಿಕಾರಿಗಳೊಬ್ಬರು ಪ್ರಶ್ನಿಸಿದಾರೆ.

* * *

ಭಾರತವನ್ನು ಮೊದಲು ಕಂಡವನು, ವಾಸ್ಕೋಡಿಗಾಮನಲ್ಲ, ರಷ್ಯನ್ ವರ್ತಕ ನಿಕಿಟಿನ್ ಅಂತೆ...ಕಂಡದ್ದು ಹೇಳಿದರೆ, ಕೆಂಡದಂತಾಗುವರು.... ಪೋರ್ಚುಗೀಸರು.

* * *

ಪುಸ್ತಕಗಳನ್ನು ಕೊಳ್ಳಲು ಉಪಾಧ್ಯಾಯವರಿಗೆ ಧನಸಹಾಯ (ಉಸ್ಮಾನಿಯಾ ವಿಶ್ವವಿದ್ಯಾನಿಲಯ) ಪ್ರೈವಟ್ ಟ್ಯೂಷನ್ ಹೇಳಲು ಇದು ತುಂಬಾ ಅನುಕೂಲವಾಗುತ್ತದೆ.

* * *

ಪಾತ್ರೆಯನ್ನರಿತು ವೋಟನ್ನು ಕೊಡಿ (ಮಂತ್ರಿ) ಚೊಂಬು ತಂದವರಿಗೆ ಚೊಂಬಿನಷ್ಟೇ ನೀರು.

* * *

ನಾಯಿ ಕೊಡೆಗಳಂತೆ ನಾಲ್ಕಾರು ಪಕ್ಷಗಳು ಎದ್ದಿವೆ, ಎಂಬ ಟೀಕೆ ಅಸಭ್ಯವಾದುದಲ್ಲವೆಂದು ನ್ಯಾಯವಾದಿಗಳೊಬ್ಬರು ತೀರ್ಮಾನ ಮಾಡಿರುವರು. ಆದರೆ, ನಾಯವಾದಿಗಳೇನು ಹೇಳುವರೋ ನೋಡಬೇಕು.

* * *

ದೊಡ್ಡ ಕನ್ನಹಳ್ಳಿಯ ಆಹಾರ ಡಿಪೋದಲ್ಲಿ ಕಳ್ಳತನ. (ಸುದ್ದಿ)—ಹೆಸರಲ್ಲೇನೋ ಇದೆ.

* * *

ಗವರ್ನರ್ ಶ್ರೀ ಮೋದಿ, ತಾವು ಹುಡುಗನಾಗಿದ್ದಾಗ, ರೈಲ್ವೆ ಗಾರ್ಡಾಗಬೇಕೆಂದು ಬಯಸುತ್ತಿದ್ದರಂತೆ.. ನಮ್ಮಲ್ಲಿ ಅನೇಕ ಹುಡುಗರು ತಾವು ಮಾಸ್ತರುಗಳಾಗಬೇಕೆಂದೂ, ತಮ್ಮ ಮಾಸ್ತರುಗಳು ಹುಡುಗರಾಗಬೇಕೆಂದೂ ಬಯಸುತ್ತಿರುವರು.

* * *

ತೆಂಗಿನಕಾಯಿ ಧಾರಣೆ ದಿನದಿನಕ್ಕೂ ಏರುತ್ತಿದೆ (ಸುದ್ದಿ) ಚುನಾವಣೆಯಲ್ಲಿ ಜಯಗಳಿಸಲು ತೆಂಗಿನಕಾಯಿ ತುಂಬ ಉಪಕಾರಿ.

* * *

ಕೊರಿಯಾದಲ್ಲಿರುವ ಬ್ರಿಟಿಷ್ ಸೈನಿಕರು. ಅಮೇರಿಕನ್ನರಿಗೆ ಒಂದು ಸವಾಲ್ ಹಾಕಿದಾರೆ: ನೀವು ಕ್ರಿಕೆಟ್ ಆಡಬಲ್ಲಿರಾ?—ಎಂದು....ಮಾವೃತ್ಸೆ ತುಂಗ್ ಕೀ ಜೈ, ಎಂದು ಕೂಗಬಲ್ಲಿರಾ, ಎಂದು ಸವಾಲ್ ಹಾಕಬಾರದೆ?

*　　　*　　　*

ಮಾದರಿ ಮೈಸೂರು, ಎಂದು ಹೇಳಿಕೊಳ್ಳುವ ಮೊದಲು, ಯಾವುದಕ್ಕೆ ಮಾದರಿ, ಎಂಬುದನ್ನು ವಿಶದಪಡಿಸಬೇಕೆಂದು ಕೇಂದ್ರ ಸರ್ಕಾರ ಪತ್ರ ಬರೆಯುವುದರಲ್ಲಿದೆಯಂತೆ

*　　　*　　　*

ಫ್ರೆಂಚ್ ಬರಹಗಾರ ರೂಸೆಯುವರಿಗೆ ಡಾ|| ರಾಧಾಕೃಷ್ಣನ್‌ರವರು ವೀಳ್ಯವನ್ನು ತರಿಸಿಕೊಟ್ಟರಂತೆ...ಪಾಂಡಿಚೇರಿಯನ್ನು ಬಿಟ್ಟು ಹೊರಡಲು ಇದು ಒಂದು ಸೂಚನೆ.

*　　　*　　　*

"ಮುಂದೆ ಮಂತ್ರಿಗಳಿಗೆ ರೂ. ೫೦೦ ಸಂಬಳ" (ಹಿಮಾಚಲ ಸುದ್ದಿ) ಹಾಗಾದರೆ ಇನ್ನೂ ಅನೇಕರು ಚುನಾವಣೆಯಿಂದ ಹಿಂತೆಗೆಯಬಹುದು.

*　　　*　　　*

ರಷ್ಯಾದಲ್ಲಿ, ಪ್ರೇಮಿಗಳು ಪರಸ್ಪರ ಕೈ ಹಿಡಿದುಕೊಂಡು ರಸ್ತೆಯಲ್ಲಿ ನಿಲ್ಲಬಾರದು....ಒಬ್ಬರು ಮತ್ತೊಬ್ಬರಿಗೆ ಕೈ ಕೊಡಬಾರದೆಂಬುದೇ ಇದರ ಅರ್ಥ.

*　　　*　　　*

"ರಷ್ಯಾ ತಿದ್ದುಪಡಿಗೆ ತಿರಸ್ಕಾರ" (ಸುದ್ದಿ) ಇನ್ನು ಮೇಲೆ, ರಷ್ಯಾದೇಶದ ಸೂಚನೆಗಳಿಗೆಲ್ಲ, "ಬಿದ್ದುಪಡಿ" ಎಂದು ಹೇಳುವುದೇ ಸರಿ.

*　　　*　　　*

ಕ್ಯಾಂಟನ್ ನಗರದಲ್ಲಿ ಕಾಗೆಗಳಾಗಲಿ, ಬೀದಿ ನಾಯಿಗಳಾಗಲಿ, ಇಲ್ಲ.... ಹಾಗಾದರೆ, ಪಾಪ, ಅವರು ಚುನಾವಣೆ ಪ್ರಚಾರವನ್ನು ಹೇಗೆ ನಡೆಯಿಸಿಯಾರು?

*　　　*　　　*

ಟಿಕೀಟ್ ಸಿಗದವರಲ್ಲನೇಕರು ಬೇರೆ ಪಕ್ಷ ಸೇರಿದಾರೆ...ಜಾಣರು ಹಾಗೆ ಮಾಡುವುದಿಲ್ಲ. ಮುಂದಿನ ರೈಲು ಬರುವತನಕ ಕಾದಿರುತ್ತಾರೆ.

*　　　*　　　*

"ನಮ್ಮ ಪಕ್ಷ ಗೆದ್ದರೆ, ತಲಾ ೧೨ ಗಜ ಬಟ್ಟೆ ಒದಗಿಸುತ್ತೇವೆ"....ಅಂದರೆ, ಮೈ ಬತ್ತಲೆಯಾಗಿಯೇ ಉಳಿಯುತ್ತದೆ.



# ಸೋತವರಿಗೆ ಸಮಾಧಾನ

"ಸೋತಾಗ, ನಾವು ಯಾವಾಗಲೂ, ನಮ್ಮನ್ನು ಬೈದುಕೊಳ್ಳಬಾರದು. ತಪ್ಪು ನಮ್ಮದಲ್ಲವೇ ಅಲ್ಲ. ನಮ್ಮಂಥ ಯೋಗ್ಯರೂ ಸಮರ್ಥರೂ ದೇಶಾಭಿಮಾನಿಗಳೂ ಭಾರತ ಭೂಮಿಯಲ್ಲೇ ಇಲ್ಲ. ನಮ್ಮ ಪಕ್ಷಕ್ಕಿಂತ ಬೇರೆ ಉತ್ತಮ ಪಕ್ಷವೇ ಇಲ್ಲ.

ನಾವು ಸೋತದ್ದಕ್ಕೆ ಮುಖ್ಯ ಕಾರಣ, ಗ್ರಹಗಳು; ನಂತರ, ಚುನಾವಣೆ ಇಷ್ಟು ಬೇಗ ಜರುಗಿದ್ದು; ಮತ್ತೆ, ನಾವು ಚುನಾವಣೆಗೆ ನಿಂತ ಕ್ಷೇತ್ರ, ನಮ್ಮ ಜನ್ಮ ರಾಶಿ ಬೇರೊಂದಾಗಿದ್ದರೆ, ನಮಗೆ ಇನ್ನೂ ಕೊಂಚ ಕಾಲಾವಕಾಶ ದೊರೆತಿದ್ದರೆ, ನಾವು ಬೇರೊಂದು ಕ್ಷೇತ್ರವನ್ನಾರಿಸಿದ್ದರೆ, ನಾವು ಜಯಸ್ತಂಭವನ್ನೇರಿ ಮೆರೆಯಬಹುದಾಗಿತ್ತು.

ಅಲ್ಲದೆ, ನಮ್ಮ ಏಜಂಟರುಗಳೂ ಕೈಕೊಟ್ಟರು. ಹಾಳು ಈಗಿನ ಕಾಲದಲ್ಲಿ ನಾವು ಯಾರನ್ನೂ ನಂಬುವಂತಿಲ್ಲ. ಕೂಳೊಂದು ಕಡೆ, ಗೀಳು ಮತ್ತೊಂದೆಡೆ, ಊಟ ಒಬ್ಬನದು, ಕೂಟ ಬೇರೊಬ್ಬನ ಕೂಡ; ಕೃತಘ್ನರು; ಸರಸವಾಡುತ್ತ ಗರಗಸದಲ್ಲೇ ಕೊಯ್ಯುವರು. ಮುಂದಿನ ಚುನಾವಣೆಯ ಹೊತ್ತಿಗೆ ನಾವೇ ಒಂದು ಹೊಸ ಪಕ್ಷ ಸೃಜಿಸಬೇಕಾಗಿದೆ. ಇರಲಿ, ಅದು ಮುಂದಿನ ಮಾತು.

ನಮ್ಮ ಚಿಹ್ನೆಯೂ ಕೂಡ ಅಷ್ಟು ಸಮರ್ಪಕವಾಗಿರಲಿಲ್ಲ. ಎಷ್ಟು ಬಾರಿ ಅದನ್ನು ವೋಟರುಗಳ ಮುಂದಿಟ್ಟರೂ, ಅವರಿಗೆ ಅದು ಸ್ಪಷ್ಟವಾಗಿ ನೆನಪಿಗೆ ಬರುವಂತಿರಲಿಲ್ಲ. ಅಲ್ಲದೆ, ನಮ್ಮ ಕಡೆಯವರು ಅನೇಕರಿಗೆ ಅವತ್ತು ಇತರೇ ಕೆಲಸಕಾರ್ಯಗಳು ಬಿದ್ದುಬಿಟ್ಟಿತ್ತು. ನೂರಾರು ಜನ ಜ್ವರದಿಂದ ಹಾಸಿಗೆ ಹಿಡಿದಿದ್ದರು.

ನಾವು ಅಷ್ಟೊಂದು ಪ್ರತ್ಯಕ್ಷವಾಗಿ ವೋಟಿನ ಬೇಟೆಗಾಗಿ ಮನೆ ಮನೆ ಅಲೆಯಬಾರದಾಗಿತ್ತು. ಹಿಂದೆ ಅಡಗಿಕೊಂಡು, ಸ್ವಯಂಸೇವಕರನ್ನು ಅಟ್ಟಬೇಕಾಗಿತ್ತು. ಗೆದ್ದವರಲ್ಲನೇಕರು ಹಾಗೆಯೇ ಮಾಡಿದರು—ತಮ್ಮ ಮುಖ ತೋರಿಸಲಿಲ್ಲ ಅಂಡರ್ ಗ್ರೌಂಡಿನವರನೇಕರಿಗೆ ಟ್ರಾವಂಕೂರ್—ಕೊಚಿನ್ನಲ್ಲಿ ಜಯ ಬಂದದ್ದು, ಈ ಕಾರಣದಿಂದ. ಕಾಣದ ವ್ಯಕ್ತಿ, ಕಂಡ ವ್ಯಕ್ತಿಗಿಂತ ಉತ್ತಮ, ಎಂದು ಅಲ್ಲಿಯ ಮಹಾಜನಗಳು ತೀರ್ಮಾನಿಸಿದರು. ನಾನೂ, ಒಲೆ ಮರೆ ಬೆಕ್ಕಾಗಿ ಕುಳಿತು ಬಿಟ್ಟಿದ್ದರೆ, ನನ್ನನ್ನೂ ಸಿಂಹ ಎಂದು ಜನ ಎಣಿಸುತ್ತಿದ್ದರೋ ಏನೋ?

ಹೇಗಾದರೂ ಆಗಲಿ, ಒಳ್ಳೆಯ ಅನುಭವ ಬಂದಹಾಗಾಯಿತು. ಗೆದ್ದವರ ತಾಪತ್ರಯ, ಅವರಿಗೆ ಲಭಿಸುವ ಬೈಗಳ ಮಳೆ ನಮಗಿಲ್ಲವಲ್ಲಾ!

—ಕುಮಾರ ಕೆಂಪಯ್ಯ.

# ಅನ್ಯಾಯದ ಗುರು

—

ಮುಖ್ಯ, ನನ್ನ ತಾಯಿಯದೇ ತಪ್ಪು. ನನ್ನ ತಾಯಿ ಒಬ್ಬರು ಮಾತ್ರ ಅಂತಲ್ಲ. ಎಲ್ಲರ ತಾಯಂದಿರೂ ಅಷ್ಟೆ. ಮುಂದಕ್ಕೆ, ಮಕ್ಕಳು ಎಷ್ಟು ಬೆಳೆದರೂ, ಎಷ್ಟು ವಿದ್ಯಾವಂತರಾದರೂ, ಎಷ್ಟು ದೊಡ್ಡ ಅಧಿಕಾರಕ್ಕೇರಿದರೂ ಮಂತ್ರಿಗಳೇ ಆದರೂ ಅವರು ನೆಟ್ಟಗಾಗದೆ ಇರುವುದರ ಕಾರಣ-ತಾಯಂದಿರೇ.

ಅಂದರೆ, ನಮ್ಮ ದೇಶದಲ್ಲಿ, ಏಕೆ, ಇಡೀ ಪ್ರಪಂಚದಲ್ಲೇ, ಹರಡಿ ಬೇರೂರಿರುವ ಭಾರಿ ಸೊಟ್ಟು ಏನು? ಯೋಚಿಸಿ. ನುಡಿದಂತೆ ನಡೆಯುವುದಿಲ್ಲ, ಎಂಬುದು ತಾನೆ? ಬಾಯಲ್ಲಿ ಶರಣಾರ್ಥಿ ಕೊಂಕುಳಲ್ಲಿ ದೊಣ್ಣೆ, ಅಥವಾ ಬಾಯಲ್ಲಿ ಸತ್ಯ ಕೆಲಸದಲ್ಲಿ ಅಸತ್ಯ ಪುರಾಣದ ಬದನೇಕಾಯಿ ವರ್ಜ್ಯ ಹಿತ್ತಲ ಬದನೆಕಾಯಿ ಪೂಜ್ಯ, ವರ್ಡು ಬೇರೆ ಡೀಡು ಬೇರೆ—ಇದು ತಾನೆ?

ಈ ದುರ್ಗುಣವನ್ನು ನಮಗೆ ಕಲಿಸಿದವರು ಯಾರು? ನನಗಂತೂ, ನನ್ನ ತಾಯಿ! ಹುಟ್ಟಿದ ಕೂಡಲೇ ನಾನು ಗೊಳೋ ಅಂತ ಅತ್ತೆನಂತೆ. ಬಲು ತುಂಟನಾಗಿ ಬೆಳೆದೆನಂತೆ; ಅಂದ್ರೆ ಬಲು ಜಾಣನಾಗಿದ್ದೆನಂತೆ; ನನ್ನ ತಾಯಿಗೆ, ಪಾಪ, ಆಗಲೇ ಆರು, ನಂತರ ಮೂರು, ಸಂಸಾರ ತಾಪತ್ರಯ, ಅಪ್ಪ ಒಬ್ಬ ಎಲ್. ಡಿ. ಸಿ.; ಐದು ರೂಪಾಯಿ ಬಡ್ತಿ ದೊರೆಯುವುದರೊಳಗೆ ಅವನಿಗೆ ಐದು ಮಕ್ಕಳು ಹೆಚ್ಚು. ಆದ್ದರಿಂದ, ನನ್ನ ತಾಯಿಗೆ ಹುಡುಗರ ಹಾವಳಿಯನ್ನು ನಿರ್ವಹಿಸುವುದು ಕಷ್ಟವಾಗುತ್ತಿತ್ತು.

ಸರಿ! ಮಾತುಮಾತಿಗೂ ಅವಳು ನಮ್ಮನ್ನ ಗದರಿಸುತ್ತಿದ್ದಳು. ಒಂದು ದಿನ– ನನಗೆ ಆಗ ಇನ್ನೂ ಎರಡು ವರ್ಷ ವಯಸ್ಸು—ಅವಳು ನನ್ನ ಕಿರಿ ಅಣ್ಣನನ್ನು ರಟ್ಟೆ ಹಿಡಿದೆಳೆದು ಅಡಿಗೆ ಮನೆಗೆ ಒಯ್ದಳು. ದಾರಿಯುದ್ದಕ್ಕೂ "ಬಾ, ನಿನ್ನ ಬಲಿ ಹಾಕಿ ಬಿಡ್ತೀನಿ" ಅನ್ನುತ್ತಿದ್ದರು. ನಾನು ಅಲ್ಲೇ ಮೂಲೆಯಲ್ಲಿ ಗಿಲಕಿ ಒಂದನ್ನಾಡಿಸುತ್ತಾ ಕುಳಿತಿದ್ದೆ. "ಯಾವ ದೇವರಿಗೆ? ಯಾವ ಆಯುಧದಿಂದ? ಹಣೆಗೆ ಕುಂಕುಮ ಹಚ್ಚುತ್ತಾಳೋ? ಒಂದೇ ಏಟಿಗೆ ಕತ್ತು ಕೆಳಗೆ ಬೀಳುತ್ತದೋ? ಉಸಿರು ಕಟ್ಟಿ ಸಾಯಿಸಿದರೆ ಇನ್ನೂ ಪ್ರಶಸ್ತ ಅಂತಾರಲ್ಲಾ, ಹಾಗೆ ಮಾಡುತ್ತಾಳೋ? ಮಕ್ಕಳನ್ನು ಬಲಿಕೊಟ್ಟರೆ, ಕೊಟ್ಟವರಿಗೆ

ಫಲ ಎಂಥದ್ದು ? ಮೋಕ್ಷವೇ? ಬ್ರಹ್ಮಲೋಕವೇ? ಆ ಮಕ್ಕಳು, ಪಾಪ, ಬಲಿಯಾದವರು, ಅವರಿಗೆ ಯಾವ ಲೋಕ? ಅಲ್ಲಿ ನನ್ನ ಕಿರಿ ಅಣ್ಣ ಇಲ್ಲಿ ನನಗಿಂತಲೂ ಸುಖವಾಗಿರುತ್ತಾನೋ? ಹಾಗಾದರೆ ನನ್ನ ಸರದಿ ಯಾವಾಗ ? ನಾನೂ ದೊಡ್ಡ ತುಂಟತನ ನಡೆಸಿ, ಬಲಿಯಾಗಿ, ಆ ಲೋಕ ಸೇರಿ ಕಲ್ಲು ಸಕ್ಕರೆ ಬೆಟ್ಟದ ಕೆಳಗೆ ಜೇನುತುಪ್ಪದ ಹೊಳೆಯ ದಂಡೆಯ ಮೇಲೆ......" ಎಂದು ಮುಂತಾಗಿ ನನ್ನ ವಿಚಾರ ಲಹರಿ ಹರಿಯತೊಡಗಿತು. ಆಗ, ನನ್ನ ಕಿರಿ ಅಣ್ಣ ಓಡೋಡಿ ನನ್ನ ಹತ್ತಿರ ಬಂದ—ಅಮ್ಮ ಕೊಟ್ಟ ಕೋಡುಬಳೆ ಸಹಿತ.

ನಮ್ಮಪ್ಪನೂ ಅಷ್ಟೆ. ಶುದ್ಧ ಮೋಸಗಾರ. ಬೇರೆ ಊರಿಗೆ ಹೋಗುವಾಗ ನಾಳೆ ಬಂದುಬಿಡ್ತೇನೆ, ಅಂತಾನೆ, ನಾಳೆ ಬರುವುದಿಲ್ಲ. ಬಿಸ್ಕತ್ತು ತಂದು ಕೊಡ್ತೇನೆ ಅಂತಾನೆ, ತರುವುದಿಲ್ಲ. ಕಾಫಿ ಕಹಿ ಅಂತಾನೆ, ತಾನು ಮಾತ್ರ ನಾಲಗೆ ಚಪ್ಪರಿಸಿಕೊಂಡು ತಾನು ಬಟ್ಟಲು ಬಟ್ಟಲು ಇಳಿಸುತ್ತಾನೆ; ನಿದ್ದೆ ಮಾಡಿದರೆ, ಸಿನಿಮಾಗೆ ಕರೆದುಕೊಂಡು ಹೋಗ್ತೇನೆ ಅಂತಾನೆ, ನಾನು ನಿದ್ದೆ ಮಾಡುವ ಸಮಯ ನೋಡಿ ತಾನು ಎದ್ದುಬಿಡ್ತಾನೆ.

ಎಂಥ ಅನ್ಯಾಯ! ದೊಡ್ಡವರು, ತಾವು ಹೇಳಿದಂತೆ ನಡೆಯದಿದ್ದರೆ, ನಾವು ಚಿಕ್ಕವರು ಅವರನ್ನೇ ಅನುಸರಿಸಿ ಜಾಳಾಗುವುದಿಲ್ಲವೇ ? ಬಲಿ ಹಾಕ್ತೇವೆ ಅಂತಾರೆ, ಬಲಿ ಹಾಕೋದಿಲ್ಲ; ಫೆಯಿಲು ಅಂತಾರೆ, ಪಾಸು ಮಾಡಿಸುತ್ತಾರೆ; ಸೀಟ್ ಇಲ್ಲ ಅಂತಾರೆ, ಕೊಡುತ್ತಾರೆ; ಮನೆಯೊಳಗಿಲ್ಲ ಅಂತಾರೆ, ಇರುತ್ತಾರೆ; ಕೈಗಾರಿಕೆ ಅಂತಾರೆ, ಯಂತ್ರಗಳ ಮೂಲಕ, ಕೈಗಳ ಸಹಾಯವಿಲ್ಲದೆ, ಸಾಮಾನುಗಳನ್ನು ತಯಾರು ಮಾಡುತ್ತಾರೆ; ಬರ್ತೇನೆ ಅಂತಾರೆ, ಹೋಗ್ತಾರೆ;

ಇದನ್ನೆಲ್ಲಾ ನಾನು ನನ್ನ ಎರಡನೆಯ ವಯಸ್ಸಿನಿಂದಲೇ ಗಮನಿಸುತ್ತಾ ಬೆಳೆದೆ. "ನುಡಿದಂತೆ ನಡೆ" ಎಂದು ನನಗೂ ಮೇಷ್ಟ್ರು ಕಾಪಿ ಬರೆಯಿಸಿದರು; ನಮ್ಮ ಸ್ಕೂಲು ಬಾಗಿಲವಾಡದ ಮೇಲೂ ಸೀಮೆಸುಣ್ಣದಿಂದ ಆ ಮಾತು ಬರೆದಿದೆ. ಆದರೆ, ಜಗತ್ತಿನಲ್ಲಿ ಅದನ್ನು, ನನ್ನ ತಾಯಿ ಆದಿಯಾಗಿ, ಯಾರೂ ಅನುಸರಿಸುತ್ತಿಲ್ಲ ಎಂದು ಮನಗಂಡ ಮೇಲೆ, ನಾನೊಬ್ಬ ಮಾತ್ರ ಏಕೆ ಬಲಿಯಾಗಬೇಕು ? ನನ್ನಂತಹ ಇತರರನ್ನು ನಾನು ಏಕೆ ಈ ವಿಷಯದಲ್ಲಿ ಟೀಕಿಸಬೇಕು ?

—ಪಾಟೀಲ.

— o —



# ಸೂರ್ಯೋದಯ





ಈ ಕವಿಗಳ ಕಣ್ಣುಗಳನ್ನೆಲ್ಲ ಕುಕ್ಕಬೇಕು. ಇಲ್ಲದ ಸಲ್ಲದ ಹೊಗಳಿಕೆ ಮಾತುಗಳಿಂದ ಅವರು ಸೂರ್ಯೋದಯವನ್ನು ಒಂದು ಮಹಾದ್ಭುತ ಮಂಗಳ ಮುಹೂರ್ತವಾಗಿ ಮಾರ್ಪಡಿಸಿದಾರೆ. ಮುಂಬೆಳಕಂತೆ, ಹಕ್ಕಿಗಳ ಕೂಜನವಂತೆ, ಕಮಲಗಳ ಭಾಗ್ಯೋದಯವಂತೆ....ಕಗ್ಗ, ಶುದ್ಧ ಕಗ್ಗ! ಎಷ್ಟೊಂದು ಸಂಸಾರಗಳು ಸೂರ್ಯೋದಯವನ್ನು ಶಪಿಸುತ್ತಿದಾರೆ: ಮತ್ತೊಂದು ದಿನ ಬಂತಲ್ಲಾ, ಸಾಲಗಾರರು ಮತ್ತೆ ಪೀಡಿಸಲು ಬರ್‍ತಾರಲ್ಲಾ, ಹಾಲಿನವನಿಗೆ ಬಾಕಿ ಕೊಡಬೇಕಲ್ಲಾ, ಮಗುವಿಗೆ ಟೈಫಾಯಿಡ್ ಜ್ವರದ ಹದಿನಾಲ್ಕನೆಯ ದಿನ ಏಕೆ ಬಂತು, ಅಕ್ಕಿಗೆ ಅಲೆಯಬೇಕಾಗಿಬಂತಲ್ಲಾ, ಎಂದು. ಮುಂಬೆಳಕನ್ನು ಹೊಟ್ಟೆ ತುಂಬಿದ ಕವಿಗಳು ಬಣ್ಣಿಸಬಹುದು; ಆದರೆ, ಅದು ನಿಜಕ್ಕೂ ಲೋಕದಲ್ಲಿ ೧೨೦೦ ಕೋಟಿ ಜನಕ್ಕೆ ಹೊಂಬೆಳಕಲ್ಲ, ಹೊನ್ನಿನ ಅಭಾವವನ್ನು ನೆನಪಿಗೆ ತಂದು ನೋಯಿಸುವ ಕತ್ತಲೆ. "ಹಕ್ಕಿಗಳ ಕೂಜನ"ವೆಂದು ಕವಿಗಳು ಬಣ್ಣಿಸುವ ಆ ಗಾನದ ಗುಟ್ಟುತಾನೆ ಏನು? ಸೂರ್ಯನಿಗಾಗಿ ಅವು ಹಾಡುವ ಸ್ತೋತ್ರವೆ? ಅಲ್ಲ. ಹುಳ ಹುಪ್ಪಟೆಗಳನ್ನು ತಾವು ಹಿಡಿದು ತಿನ್ನಲು ಅನುಕೂಲಿಸುವಂತೆ ಜಗಕೆಲ್ಲ ಬೆಳಕು ಹಂಚಿದ ಜ್ಯೋತಿಗೆ ಅವು ನೀಡುವ ವಂದನಾರ್ಪಣೆ. ಆ ಗಾನದ ಹಿಂದೆ, ಲಕ್ಷೋಪಲಕ್ಷ ಕ್ರಿಮಿಗಳ ಚರಮ ಗೀತೆಯು ತಾನವಿದೆ; ಕ್ರೌರ್ಯದ ಅಟ್ಟಹಾಸವಿದೆ; ಅಶಕ್ತ ಕೀಟಗಳ ಆರ್ತನಾದವಿದೆ. ಕಮಲಗಳ ಭಾಗ್ಯೋದಯಕ್ಕೆ ಬದಲಾಗಿ, ಎಷ್ಟೊಂದು ಕಮಲೆಯರು ಸೂರ್ಯೋದಯವಾಗುತ್ತಲೂ ಹಸಿವು ಜ್ವರ ಸಂಕಟ ಸಂತಾಪಗಳಿಂದ ಪೀಡಿತರಾಗಿ, ನೆಲದಿಂದ ಏಳಲಾರದೆ, ಹೊಸ ದಿನದ ಕೆಲಸಗಳಿಗಾಗಿ, ಮನಸ್ಸಿಲ್ಲದ ಮನಸ್ಸಿಂದ, ಬಲವಂತದಿಂದ ಏಳುತ್ತಿದಾರೆ!

ಒಂದು ಸೂರ್ಯೋದಯವಾಯಿತೆಂದರೆ, ಜೀವಂತ ಜನರೆಲ್ಲ ಸಾವಿನೆಡೆಗೆ ಒಂದು ಹೆಜ್ಜೆ ಹತ್ತಿರ ಹೋದಂತೆಯೇ ಅಲ್ಲವೆ? ಅಣು ಬಾಂಬುಗಳಿಂದ ಮಾನವನ ನಾಗರಿಕತೆ ನಾಶವಾಗುವ ದಿನ ಇನ್ನೂ ಕೊಂಚ ಹತ್ತಿರ ಬಂದ ಹಾಗಲ್ಲವೆ? ಕೊಡಬೇಕಾದ ಸಾಲಕ್ಕೆ ಮತ್ತೊಂದಿಷ್ಟು ಬಡ್ಡಿ ಕೂಡಿ ಬಂದ ಹಾಗಾಯಿತಲ್ಲವೆ? ಮದುವೆಯಾಗದ ಹೆಣ್ಣುಮಕ್ಕಳಿನ್ನೂ ಉಳಿದಿರುವ ಸಂಸಾರಗಳಲ್ಲಿ, ನಿಟ್ಟುಸಿರು ಮತ್ತೊಂದೂ ಸೇರಿದಂತಾಗಲಿಲ್ಲವೆ? ನೌಕರಿ ಸಿಕ್ಕದ ಪದವೀಧರನಿಗೆ, ಮತ್ತೊಂದಿಷ್ಟು ಮಾನಭಂಗಕ್ಕೆ ದೇವರು ಅವಕಾಶ ಮಾಡಿದಂತಲ್ಲವೆ?

ಸೂರ್ಯೋದಯವಾಗುತ್ತಲೇ, ಲಕ್ಷೋಪಲಕ್ಷ ಸವಿಗನಸುಗಳು ಒಡೆದು ಪುಡಿಪುಡಿಯಾಗುವುವು. ನಿದ್ದೆಯಿಂದೆದ್ದ ಕಟುಕರೂ ಕುಹಕಿಗಳೂ ವಾಚಾಲರೂ ಮತ್ತೆ ತಮ್ಮ ಹಿಂಸಾ ಕ್ರಮವನ್ನು ಮುಂದುವರಿಸುವರಷ್ಟೆ. ಲಾಯರುಗಳು ಬಿರುಬಿರನೆ ತಮ್ಮ ಕಚೇರಿಗಳಿಗೆ ಹೋಗಿ ಕುಳಿತು ಕಾನೂನುಗಳಲ್ಲಿ ಕಂಡಿ ಹುಡುಕುವರಷ್ಟೆ! ಮಾಸ್ತರುಗಳು ಶಾಲೆ ಬಾಗಿಲು ತೆಗೆದು ಬೆತ್ತ ಸಹಿತರಾಗಿ ಬಾಲಕರನ್ನೆದುರುಗೊಳ್ಳುವರಷ್ಟೆ! ಕಾರ್ಖಾನೆಗಳು ವಿಕಟ ಚೀತ್ಕಾರಗಳಿಂದ ಕೂಲಿಗಾರರನ್ನು ಕರೆದು ರಾಕ್ಷಸೀಯಂತ್ರಗಳ ಉಪಚಾರಮಾಡಿರೆಂದು ಆರ್ಭಟ ಮಾಡುವೆವಷ್ಟೆ! ಸಮಾಧಿಯ ಆನಂದದಲ್ಲಿ ತಲ್ಲೀನವಾಗಿ, ಜಗದ ಜಂಜಡವನ್ನೆಲ್ಲ ಮರೆತು ನಿದ್ದೆಮಾಡುತ್ತಿದ್ದ ಬಡಬಗ್ಗರನ್ನೂ ರೋಗಿಗಳನ್ನೂ ಅರಿಯದ ಬಾಲಕರನ್ನೂ ಬಿಸಿಲಿನ ಬೇಗೆಯಿಂದ ಬಡಿದೆಬ್ಬಿಸುವ ಸೂರ್ಯನನ್ನು ಹಾಡಿ ಸ್ತುತಿಸುವ ಈ ಕವಿಗಳನ್ನು ಗಡೀಪಾರು ಮಾಡದಿದ್ದರೆ, ಸತ್ಯ ಉಳಿಯುವುದು ಹೇಗೆ?

— ಸತ್ಯಬೋಧ.

— o —



# ಆಲು—ಕೆನೆ

ಆಚೆ ಜೆಡೆ! ಈಚೆ ಜೆಡೆ!
ನಡಿವೆ ಮಾನ ಸೇತವೆ?
ಅಕ್ಕ ತಂಗಿ ಕುಂತಂಗೆನೆ
ಕಟ್ಟಿ ಮ್ಯಾಗೆ ಕೂತವೆ! ೧

ಈಚಿದೊಂದು ನನ್ ಮಡಗಿ—
ಆಚೆ—ಆಚೆ ಮನೇದು!
ಜೋಡಿ ಮಾವ ಯಿದ್ದಂಗೆನೆ—
ಒಂದೆ ಕೊಂಬೆ ಕೊನೇದು! ೨

ಮರಿಬಟಾಣಿ ಶಿಪ್ಪೆ ಸುಲದು
ಬಾಯಿಗ್ ಯೆಸಕೊತ—
ಇದ್ಕಿದ್ದಂಗೇ ಜಗಳ ಸುರು:
“ನಂದು! ನಂದ್! ತತಾ!” ೩

ಯಿಡದ್ ಯೆಳದು ತಳ್ಳಿ ಪರಚಿ—
ಒಂದೆ ಕಾಳೆ ಕಾರಣ!
ಕಿರಿಚಿತಾವೆ: “ನಿನ್ನ ಸಿಗದು
ಕಟ್ಟ್ತೀನಿ ತ್ವಾರಣ!” ೪

ಊವ ಕಿತ್ತು, ಮಣ್ಣ್ ಎರಚಿ,
ಒಂದೊಂದರ ರಿಬ್ಬನ
ಶೀಳಿ, ಯೇಳತಾವೆ: “ನಿಂಗೆ—
ಯಿಳಸತೀನಿ ಕೊಬ್ಬ್ನ!” ೫

ಮರಿಬಟಾಣಿ ಯೆರಚಿ ಚೆಲ್ಲಿ—
ಬೀದಿ ತುಂಬ ಗದ್ದಲ!
ವೊಂದಸ್ ಒಂದು ಚೆಚ್ಚ್ತಾವೆ—
ಎರಡು ಬೆನ್ನೂ ಮದ್ದಲ! ೬

“ಅಮ್ಮಾ! ಅಮ್ಮಾ!” ಅರಚತಾವೆ—
ಕಿವಿ ಕಿತ್ತುವೋಗುದೆ!
ಯಿದಕೆ ನಮ್ಮ ಕೇರಿ ರೂಡಿ—
ಸುಂಕೆ ಕಿವ್‌ಡರಾಗುದೆ! ೭

ಅವವೇನೇ ಪೊಡದು ಬಡದು—
    ಅತ್ತು ನಿಮಿಸದೊತ್ತಿಗೆ
ಜಡಿ ರಿಬ್ಬನ ತಿದ್ದಿ ಕಟ್ಟಿ
    ಒಂದಾಗ್ತವೆ—ಮೆತ್ತಗೆ! ೮

ಅತ್ತು ನಿಮಸ ಭೋ ಯವಾರ!
    ಮತ್ತೆ ಮೊದಲಿನಂಗೆನೆ!
ಕಾದು ಕುದಿದು ಕಟ್ಟುವಂಗೆ—
    ಅಲ ಮ್ಯಾಗೆ ಶೀ ಕೆನೆ! ೯

ಯೀಗ ಶಕೆ, ಮತ್ತೆ ತಂಪು,
    ಚಕ್ಕ್ರ ತಿರುಗೊ ಮಾದರಿ—
ಪೊದ್ದಾಡ್ತವೆ, ಮುದ್ದಾಡ್ತವೆ—
    ಅವಳಿ ಜವಳಿ ಕುರಿಮರಿ! ೧೦

ಯಿಂಗೇ ದಿಶಾ—ಬಲಿ ಚಂದ—
    ಕಾಸೆ ಕೊಡದೆ—ನಾಟಕ!
ಮಕ್ಕಳಿವೇ ಜೀವದ್ ಊವ
    ನಮ್ಮ ಕೇರಿ ತ್ರಾಟಕ!

—ನಾಗ.





# ಬೆಕ್‌ಬಂತು ಬೆಕ್ಕು!

ಕಳಸತಾಳಂತೆ—ಮಗಳ, ಕಾಲೇಜಿಗೆ!
"ಹೋಗದಿರು ನೀ—ಅವಳ ಗೋಜಿಗೆ!"
ಇದು—ನಂಗೆ ತಾಕೀತು!
ಇಂಗೆನೇ ಬೆಳೆಸಿದರೆ ಹುಡಗಿ—
ಅಪ್ಪಾಂತ ನಂಗ್ ಅನ್ನ ಮಡಗಿ—
ಇದು—ಎಂಗೆ ಸಾಕೀತು? ೧

ಬುಡಿ ಬುಡೇ! 'ಆ ಆಟ' ಬರಕಿಲ್ಲ ನೆಟ್‌ಗಿನ್ನ
ಓದಿ ಬರೆಯಾಕೆ!
ಹಾವುಡೆ ಕಟ್ಟೋದ ಕಲಿಸಿಕೊಡು ಹೋದಲುಗ—
ಕಾಲೇಜ್ ಆಮ್ಯಾಕ್ಕೆ! ೨

ಏ ಅನ್ನ ಬಾರ್‍ದು! ಲೇ ಅನ್ನ ಬಾರ್‍ದು! ಅಮ್ಮ ಅನಬೇಕು!
ಈ ಯಿದನ! ಪುಟ್ಟ ಲಂಕಿಣಿನ!
ಮಕ್ಕಳೀ ಹೂನಂತೆ! ಮಾಲಿ ನಾವಂತೆ! ಮನೆ ತ್ಯಾಟವಂತೆ!
ಅನಬಾರದಂತೆ—ಈ ಗಿಣಿನ! ೩

ಬಾ ಗಿಣೀ! ಬಾಮ್ಮ! ಮುದ್ದ್‌ರಾಮು! ಮುದ್‌ರಾಮು!
ಬೆಕ್‌ಬಂತು! ಬೆಕ್ಕು! ಬೆಕ್ಕು!
ಮಲ್ಲಿ ಹೊಕ ಹೊರದಗಲ! ಮನೆ ತುಂಬ ಗದ್ದಾಲ—
ಐವೋರು ನಕ್ಕು ನಕ್ಕು! ೪

—ನಾಗ.

---

### (ಓಟಿನ ಉಮೇದುವಾರನಿಗೆ)

ನೆಚ್ಚಿದನೆಂದರೆ ಮೆಚ್ಚಿದೆನೆಂದರೆ, ಸತಿಮಾರುಹೋದೆನೆಂದರೆ
ತನುವನಲ್ಲಾಡಿಸಿ ನೋಡುವೆ, ಮನವನಲ್ಲಾಡಿಸಿ ನೋಡುವೆ ನೀನು
ಧನವನಲ್ಲಾಡಿಸಿ ನೋಡುವೆ ನೀನು, ಇವೆಲ್ಲಕ್ಕಂಜದಿದ್ದರೆ
ಕೈಹೊಸೆದು ಭೂಮಿಗಿಳಿದು ಬಾಗಿ ಬಾಗಿ ನಮಿಸುವೆಯಯ್ಯಾ
........ಓಟೊಂದ ಕೊಟ್ಟೆನಾದೊಡೆ "ನಿನ್ನ ಜುಟ್ಟೆಲ್ಲಿ?"
ಎಂದು ತಡವಿ ಕುಕ್ಕಲು ಬರುವೆಯಯ್ಯಾ ........
ಹೊ! ಒಡಲ ಸಂಕಟ ದೇವಾ.......... —ಯಜ್ಞಪಶು.

# ಎಲ ಎಲಾ....!

---

**ಜನವಾಣಿ**

ಜನರಿಗರಿಯದ ತೆರದಿ ಅವರ ಸುಲಿವವನೊಬ್ಬ
ಕಾಳಸಂತೆಯ ಹಸಿಯು ಕೊರಮನೊಬ್ಬ
ಬೀದಿಯುಳಿಯುತಲಿದ್ದ ಪುಂಡನಿವನಿನ್ನೊಬ್ಬ
ಸೀಟು ಬಿಸಿ ಮಾಡಲಿಹ ಶೋಂಭೇರಿಯೊಬ್ಬ
ನಾಲ್ವರಲಿ ಯಾರ ನಾವ್ ಆರಿಸೋಣ
ವೋಟಿನಾ ಋಣವನ್ನ ತೀರಿಸೋಣ?

**ಅಶರೀರವಾಣಿ**

ಎಲ್ಲ ಋಣ ಓರ್ವನಿಗೆ ಸಲುವುದೆನ್ನಿ
ಸೃಷ್ಟಿಸಿದನೂ ನಾನೆ
ಪಾಲಿಸುವನೂ ನಾನೆ,
ಮತ್ತೆ ಬೇಕೆನಿಸಿದರೆ—
ಲಯಗೊಳಿಪನೂ ನಾನೆ,
ನನ್ನ ಟರ್ಮೀ ನಿಮಗೆ
ಕ್ಷೇಮವೆನ್ನಿ—
ಎಲ್ಲರನು ತ್ಯಜಿಸಿ ನೀವ್
ನನಗೆ ಶರಣೆನ್ನಿ—
ನಿಮ್ಮೋಟು ಓರ್ವನಿಗೆ
ಮೀಸಲೆನ್ನಿ !

**ವೋಟು ಬೇಟೆಗ**

ಎಲ ಎಲಾ .......... ...!
ನೀನ್ ಬೇರೆ ಇಳಿದೆಯಾ ವೋಟಿನಾಟಕ್ಕೆ ?
ಇದು ಗಂಟು ಮುಳುಗೀತು ಜೋಕೆ! ಜೋಕೆ!

—ಎ. ಎಸ್. ರಾಮಕೃಷ್ಣ.



# ಎಲೆಕ್ಷನ್ ಕೆಚ್ಚು

( ವಚನ ನಾಟಕ )

---

**ಪಾತ್ರಗಳು :** ೧ ಉಮೇದುವಾರ—ರಾಜೀವಪುರದ ರಂಗಯ್ಯ
೨ ಓಟುದಾರ —ಗುಟ್ಟಳ್ಳಿ ರಾಮಯ್ಯ

**ಉಮೇದುವಾರ:** ಕೊರೆಯದೆ ಎನ್ನ ಮನದಾಸೆ ಈಡೇರಿಸಯ್ಯ ಒರಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ ಶಾಖಾಯುಲವಣಾಯ ನೋಡಯ್ಯ-ಓಟು ಕೊಟ್ಟು ಸಲಹೋ ಗುಟ್ಟಳ್ಳಿ ರಾಮಯ್ಯ.

**ಓಟುದಾರ:** ಅಯ್ಯ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು' ನಾ ನಿನ್ನ ಆರಿಸಲಾರೆನಯ್ಯ! ಅಯ್ಯ ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿರ್ದೊಡೆ ಮಾಣು! ನಾ ನಿನಗೆ ಓಟು ಕೊಡಲಾರೆನಯ್ಯ-ರಾಜೀವಪುರದ ರಂಗಯ್ಯ, ನಾ ನಿನ್ನ ಮತಿಹೀನತೆಯ ಸೈರಿಸಲಾರೆನಯ್ಯ.

**ಉಮೇದುವಾರ :** ಮತಿಹೀನನೆಂದೇಕೆ ನಿರಾಕರಿಸುವೆಯಯ್ಯ! ಬುದ್ಧಿಯೊಳು ವಿಸಂಚವಿಲ್ಲ-ಗರ್ವವಿಲ್ಲ-ಮದದ ಸೊಗಡಿಲ್ಲ. ಕೋಪದ ಮಾತೇಕೆ? ರಾಮಯ್ಯ-ಜನಸೇವೆಯೇ ಜನಾರ್ದನ ಸೇವೆ ಎನಗೆ, ದೇಶಸೇವೆಯೇ ಈಶ ಸೇವೆ ಎನಗೆ, ಪಾರ್ಲಿಮೆಂಟೇ ದೇಗುಲವೆನಗೆ; ದೇಶಭಕ್ತನೊಬ್ಬ, ಪಕ್ಷಗಳು ಹಲವು. ಹಲವು ಪಾರ್ಟಿಗಳ ಎಂಜಲು ತಿಂಬುವನಲ್ಲಯ್ಯ, ನಂಬಿ ಕೇಳುವೆನಯ್ಯ, ಬಚ್ಚಿ ಕೇಳುವೆನಯ್ಯ-ಓಟು ಕೊಟ್ಟು ಸಲಹೋ ಗುಟ್ಟಳ್ಳಿ ರಾಮಯ್ಯ.

**ಓಟುದಾರ:** ಆಡಿದರೇನು? ಬೇಡಿದರೇನು? ಕಾಡಿದರೇನು? ನಾ ನಿನಗೆ ಓಟು ಕೊಡಲಾರೆನಯ್ಯ. ಆರು ಮುನಿದು ನಮ್ಮನೇನು ಮಾಡುವರು? ನೀ ಮುನಿದು ಎಮ್ಮನೆಂತು ಮಾಡುವೆ?—ಎಮ್ಮ ಮನೆಗೆ ರೆಂಟು ಕೊಡಬೇಡ-ಎಮ್ಮನೆಯ ರೇಷನ್ ಅಕ್ಕಿಯಲಿ ಅಕ್ಕಿ ಅರಿಸಬೇಡ, ನೀನೆತ್ತ, ಪಾರ್ಲಿಮೆಂಟೆತ್ತ, ಹೋಗತ್ತ ಮರುಳೆ!

**ಉಮೇದುವಾರ:** ವಚನದಲಿ ಅಮೃತವ ತುಂಬಿ, ನಯನದಲಿ ದೈನ್ಯತೆಯ ತುಂಬಿ, ಮನದಲ್ಲಿ ನೆನಹು ತುಂಬಿ ಬೇಡುವೆನಯ್ಯ!—ಕಿಸೆಯೊಳಗೆ

ನೋಟು ತುಂಬುವೆನಯ್ಯ, ಗುಟ್ಟಳ್ಳಿ ರಾಮಯ್ಯ ನಿನ್ನ ಓಟನು ತುಂಬಿ ಸಲಹಯ್ಯ!

**ಓಟುದಾರ :** ನಾನೊಂದು ನೆನೆದರೆ ನೀನೊಂದು ನೆನೆವುದೆ, ನಾನಿತ್ತಲೆಳೆದರೆ ನೀ ಅತ್ತಲೆಳೆವುದೆ? —ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ ನೀನೊಡ್ಡಿದ ಮಾಯೆಯನಾರೂ ಗೆಲಲಾರರಯ್ಯ, ರಾಜೀವಪುರದ ರಂಗಯ್ಯ!

## ದೃಶ್ಯ—೨

(ಠೇವಣಿ ಕಳಕೊಂಡ ಕ್ಯಾಂಡಿಡೇಟ್ ಬದುಕುವುದೇ ಸೋಜಿಗ ಆದರೂ—)

**ಉಮೇದುವಾರ :** ಕಂಡ ಕಂಡವರಿಗೆಲ್ಲ ಕೈ ಮುಗಿದೆನಲ್ಲಯ್ಯ, ಎನ್ನ ಕಾಯವ ಅರ್ಪಿಸಿದರೂ ನನ್ನ ಮನೆ ಕಾಯಿಸಿದರಲ್ಲಯ್ಯ, ಬತ್ತೀಸ್ ರಾಗ ಹಾಡಿದರೂ ಬತ್ತಿಯಿಟ್ಟರಲ್ಲಯ್ಯ—ನೆಚ್ಚಿದೆವೆಂದರು, ಮೆಚ್ಚಿದೆವೆಂದರು, ಮಾರು ಹೋದೆವೆಂದರು—ತನುವನ್ನಲ್ಲಾಡಿಸಿ ನೋಡಿದರು, ಮನವನ್ನಲ್ಲಾಡಿಸಿ ನೋಡಿದರು ಧನವನ್ನಲ್ಲಾಡಿಸಿ ನೋಡಿದರು—ಕಡೆಗೆಲ್ಲರೂ ಕೈ ಕೊಟ್ಟರಲ್ಲಯ್ಯ ಹುರುಳಿಲ್ಲ ಹುರುಳಿಲ್ಲ ಓಟಾರ್ಜನೆಯಲಿ ಗುಟ್ಟಳ್ಳಿ ರಾಮಯ್ಯ.

**ಹಾ ರಾ**

"ಸಾಕು ಮಾಡೈ ತಮ್ಮ ಎಲೆಕ್ಷನ್ ನಾಟಕವನಿನ್ನು
ತೆರೆವುಗೊಡು ತಮ್ಮ. ... ...."



ಜೋಯಿಸರೇ! ಠೇವಣಿ ಕಳೆದುಹೋಗದ ಹಾಗ ಏನಾದರೂ
ಶಾಂತಿಗೀಂತಿ ಮಾಡಿಸಲು ಸಾಧ್ಯವೇ ನೋಡಿ!!

# ಹುಟ್ಟಿದ ಹಬ್ಬದ ಕರೆ

ಬೇಗ ಬೇಗ ಬೆಳೆದು ನೀನು ಮತದ ಹಕ್ಕ ಪಡೆವೆ ಸೋಮು
ಆಯಿತಿಂದು ನಿನಗು ಹತ್ತು ಹತ್ತು ಮೇಲಿ ವರ್ಷ ಏಕವು
ನಾನು ನಿನ್ನ ದೃಷ್ಟಿಯಲ್ಲಿ ಮುದುಕ, ಹಳಬನೋಬಿಹಾಯು
ಸಾನುರಾಗದಿಂದ ನಿನಗೆ ಬುದ್ಧಿ ಮಾತ ಹೇಳುವೆ

ಯುದ್ಧ ಮುಗಿದು ಭಾರತಕ್ಕೆ ಮೋಕ್ಷ ಸಿಕ್ಕಿ, ಪರ್ವಕಾಲ
ಬಂದ ಇಂದು, ನಿನಗೆ, ಪಾಷ್ಟ, ಕಷ್ಟ, ನಷ್ಟ, ಸೋಲು ಮೋಸ!
ಟ್ರೂಮಸ್ಥಾಲಿ ಚರ್ಚಿಲಾದಿ ಗಗನ ಬಾಣ ಭೀತಿಯಲ್ಲಿ
ಬಾಳ ಕಳೆವ ಭಾಗ್ಯ ಲಭಿಸಿತಲ್ಲ ಎಂದು ಕೊರಗುವೆ

ಕಾಲ ಹೊಲಸು ನೀತಿ ಕೆಸರು ಜಾತಿ ಜಾತಿ ಜಂಜಡ
ಸಾಲ ಹೆಚ್ಚು, ರೀತಿ ಡೊಂಕು, ಕರೀ ಪೇಟೆ ಮಾನ್ಯತೆ
ಎಲ್ಲ ಸತ್ಯ, ಇಲ್ಲ ಎನ್ನಲಿನಗೆ ಧೈರ್ಯ ಸಾಲದು
ಅಂತು ನೀನು ಕುಂತು ಕರಗಲಿಂದು ಕೂಡದೋ

ಜಗವ ಮರೆತು ಜಗಳ ಹೂಡಿ ಮನುಜ ದನುಜನಾಗ ಬಯಸೆ
ನೀನು ನಾನು ಏನು ತಡೆಯೆ? ಬಿಮ್ಮನಿದ್ದು ಒಮ್ಮೆ ನಕ್ಕು,
ಹರೆಯ ಬಂದ ಹುಡುಗನಾಗಿ ಹಾರಿ ಕುಣಿದು ಹಾಡಿ ನಲಿದು
ಮನೆಯ ಚಿಂತೆ ಜಿಡೆ ಅಟ್ಟಿ, ಕರೆಯೊ ಕಾವ್ಯ ಕಾಮಿನಿ.

— ಪ. ಟಾ. ಳ.



ಈಗ!! ಮೂರು ನಾಮ ಹಾಕ್ಕೊಂಡು ಮುಜರಾಯಿ ಕೆಲಸ ಕೇಳುಕ್ಕೆ ಹೋಗ್ತೀರಲ್ಲಾ.

# ಅಜ್ಜೀ ಲಾಜಿಕ್ಕು !

---

"ಅಲ್ವೇ ಅಲ್ವೇ, ಅದೇನು ಮೀಟಿಂಗು ನೀನು ಕರಕೊಂಡು ಹೋಗಿದ್ದದ್ದು, ಪುಣ್ಯಾತ್ಗಿತ್ತೀ? ಏನು ಆಕೆ ಹೇಳಿದ್ದು? ಜೊತೇಗಿಲ್ಲ, ಬಾರಜ್ಜೀ, ಕತ್ಲಾಗತ್ತೆ ಹಿಂದಿರುಗಿ ಬರ್ಬ್ಯಾಗ ಅಂತ ಕರದ್ರಲ್ಲ ಪಾಪ, ಅಂತ ಬಂದ್ರೆ, ಒಂದಕ್ಷರಾನೂ ಅರ್ಥವಾಗಿಲ್ಲ! "ಪ್ಲಾನಲ್ಲು, ಪ್ಲಾನಲ್ಲು" ಅಂತ ನೂರು ಸಾರಿ ಅಂದದ್ದು ಮಾತ್ರ ಕಿವೀಗೆ ಹಿಡೀತೂನ್ನು. ಅದೇನು ಪ್ಲಾನಲ್ಲು ಬಟ್ಟೇ ವಿಷ್ಯ ಅಷ್ಟು ಅತಿಶಯುವೇ, ಭಾಷಣ ಮಾಡೋಕೆ?"

"ಅಯ್ಯೋ ಅಲ್ಲಜ್ಜಿ, ಫ್ಲಾನಲ್ ಬಟ್ಟೆ ಅಲ್ಲ, ಫ್ಯಾಮಿಲೀ ಪ್ಲಾನಿಂಗು (Family planning) ಅಂದ್ರೆ ಮಿತಸಂತಾನದ ವಿಷ್ಯ ಅವರು ಮಾತಾಡಿದ್ದು!

"ಅದೆಂಥಾದ್ದೋ ಮಿತಸಂತಾನ ಅತಿಸಂತಾನ? ಯಾರೇನು ಅದೆಲ್ಲ ಹೇಳೋದು! ದೇವರು ಕೊಟ್ರೆ ಮಕ್ಳು, ಇಲ್ದಿದ್ರೆ ಇಲ್ಲ, ಅದಕ್ಕೆ ಭಾಷಣ ಏನು ಘೋಷಣೆ ಯಾಕೆ?

"ಹಾಗಲ್ಲಜ್ಜಿ, ಈಗಿನ ಕಾಲದಲ್ಲಿ ಹೆಚ್ಚು ಮಕ್ಕಳಿರಬಾರ್ದೂಂತ. ಒಂದು ಮನೇಲಿ ಮೂರು ನಾಲ್ಕು ಮಕ್ಕಳಿಗಿಂತ ಹೆಚ್ಚಾಗಿದ್ರೆ ಅವರಿಗೆ ಹೊಟ್ಟೇ ತುಂಬೋದು ಕಷ್ಟ; ಸರ್ಕಾರದೋರು ಎಲ್ಲಿಂದ ಆಹಾರ ತಂದು ಒದಗಿಸ್ಬೇಕು? ಅದಕ್ಕೇ ಮತ್ತೆ, ಇದಕ್ಕೊಂದು ಕಾನೂನು ಮಾಡಿಬಿಡ್ಬೇಕು, ಮಿತಸಂತಾನದ ಆವಶ್ಯಕತೇನ ಎಲ್ಲರಿಗೂ ಮನದಟ್ಟು ಮಾಡಿಸ್ಬೇಕು, ಆಗ ಎಲ್ಲರಿಗೂ ಹೊಟ್ಟೆ ತುಂಬ ಅನ್ನ ಸಿಕ್ಕತ್ತೆ, ಅಂತ ಎಲ್ಲೆಲ್ಲೂ ಪ್ರಚಾರ ಮಾಡ್ತಾ ಇದಾರೆ."

ಅಜ್ಜಿ ಬಿದ್ದೂ ಬಿದ್ದೂ ನಗತೊಡಗಿದ್ರು. "ಯಾಕಜ್ಜೀ?" ಅಂದೆ. ಅವರ ಬೊಚ್ಚು ಬಾಯಿ ಕಿವಿಯಿಂದಾ ಕಿವೀವರೆಗೂ ಬಿಚ್ಚಿತ್ತು!

"ಯಾಕಜ್ಜೀ ಹೀಗೆ ನಗ್ತಾ ಇದ್ದೀ? ಏನು ತಮಾಷೆ ಕಂಡೆ ಇದರಲ್ಲಿ?"

"ಅಲ್ವೇ, ಬಲೇ ಬುದ್ಧಿವಂತ್ರು ನೀವು ಈ ಕಾಲ್ದೋರು. ಮಕ್ಳು ಕಮ್ಮಿ ಆದ್ರೆ, ಜನದ ಹೊಟ್ಟೆ ತುಂಬತ್ಯೇ? ಕಾಯಿಗೋಸ್ಕರ ಮರಾನೇ ಕಡಿದ್ಹಾಕಿ

ದಂತಾಯ್ತು ಸಮಾಚಾರ!...........ಅಲ್ಲಾ, ಮಕ್ಳು ಕಮ್ಮಿ ಆಗ್ಹೋಗಿಬಿಟ್ರೆ ಎಷ್ಟು ನಷ್ಟ ಎಷ್ಟು ಅನಾಹುತ ಆಗತ್ತೇಂತ ಯೋಚಿಸಿದ್ಯೇನೇ ನಿಮ್ಮ ಸರ್ಕಾರ? ಜನರ ಹೊಟ್ಟೇ ತುಂಬೋ ಬದ್ಲು. ಎಷ್ಟು ಜನದ ಹೊಟ್ಟೇ ಮೇಲೆ ಹೊಡೀ ಬೇಕಾಗುತ್ತೆ ಯೋಚ್ನೆ ಮಾಡಿದ್ದಾರೇನು?

ಇವತ್ತು ವಿಶ್ವೇಶ್ವರಪುರ್ದಲ್ಲಿ ಹೆರಿಗೆ ಆಸ್ಪತ್ರೆ, ನಾಳೆ ಶಂಕರಪುರದಲ್ಲಿ ವಾರ್ಡು, ನಾಡಿದ್ದು ಸಿದ್ದೀಕಟ್ಟೇಲಿ ಸಕಲ ರೋಗದಾಸ್ಪತ್ರೆ, ಅಂತ ಕಟ್ತಾರಲ್ಲಾ—ಪಾಪ, ಬ್ಲಾಕ್ ಮಾರ್ಕೆಟ್ನೋ ಇನ್ನೆಂಥದ್ನೋ ಮಾಡಿ ಗಳಿಸದ ಪಾಪ ತೊಳೆದು ಕೊಳ್ಳೋಕ್ಕೆ ವರ್ತಕ ಪುಣ್ಯಾತ್ಮರು ಕಕ್ಕೋ ದುಡ್ಡಿನಲ್ಲಿ— ಸಂತಾನಕ್ಕೇ ರೇಷನ್ ಮಾಡ್ಬಿಟ್ಟ ಮೇಲೆ, ಆ ಆಸ್ಪತ್ರೆಗಳ ಗತಿಯೇನು? ಆ ಡಾಕಟ್ರು, ನರಸಮ್ಮಗಳು, ಇವರ ಸೈನ್ಯ ಎಲ್ಲಿ ಕಾಡುಪಾಲಾಗ್ಬೇಕು?

ಇದೂ ಅಲ್ದೆ ವರ್ಷ ವರ್ಷವೂ ಇದೆಷ್ಟೋ ಡಾಕ್ಟ್ರುಗಳು ಚಿಗರ್ಕೋ ತಾರಲ್ಲಿ, ಷಾಪುಗಳಿಟ್ಟು ಸೂಜಿ ಚುಚ್ಚಿ ಬಣ್ಣದ ನೀರ ತುಂಬಿಕೊಡ್ತಿ, ಕಾಸು ಕಸುಕೊಳ್ಳೋ ಒಡೆಯಗಳು, ಇವರ ಹೊಟ್ಟೇ ಪಾಡೇನು? ಎರಡ್ವರ್ಷಕ್ಕೆ ಒಂದೊಂದಾದ್ರೂ ಮಕ್ಕಳಾಗ್ತಿದ್ರೆ ತಾನೇ ನಿಮೋಯ್ಯಾ ಡಿಸ್ಪೆಪ್ಸಿಯ್ಯಾ' ಆ ಯ್ಯಾ ಈ ಯ್ಯಾ ಅಂತ ರೋಗಗಳ್ಬರೋದು ಆ ಡಾಕಟ್ರುಗಳ ಉದರ ಪೋಷ್ಣೇಗೆ? ನರಪೇತಲು ನಾರಾಯಣಗಳು ಹುಟ್ಟಿದ್ರೆ ಆ ಪುಡೀ ಡಬ್ಬ ಗಳು—ಶೀಶೀಗೆ ಹಾಕ್ತೇರಲ್ಲೇ—ಆಶ್ಟೋವಿಲ್ಸು, ಕವ್ವೇಗೆಟ್ಸು, ಅದೂ ಇದೂಂತ ಆ ಹಿಟ್ಟುಗಳು ಆ ಕಂಪ್ನಿಗಳೆಲ್ಲ ಮುಳುಗಿ ಹೋಗಲ್ವೇ? ಆಮೇಲೆ ಆ ಟಾಣಿಕ್ಕುಗಳು, ವಿಟಮೀನುಗಳು, ಮೀಸೆಣ್ಣೆ, ಮೊಸಳೇ ತುಪ್ಪಗಳನ್ನು ಕುಡಿ ಯೋರ್ಯಾರು? ಅವೆಲ್ಲ ತಯಾರಿಸ್ತಿರೊ ತಬ್ಬಲಿಗಳು ಉದ್ಯೋಗವಿಲ್ದೇ ಉರಲು ಹಾಕ್ಕೊಳ್ಳೋದು ತಾನೇ?

ಅಷ್ಟೇನೇ? ಈ ಮಕ್ಳನ್ನು ತುಂಬ್ಕೊಂಡು, 'ಪ್ರೈವೇಟ್ ಇಸ್ಕೂಲು, ಶಿಶುವಿಕಾರ' ಅಂತ ನಡೆಸ್ಕೊಂಡು ಹೊಟ್ಟೇ ಹೊರಕೋತಿದಾರಲ್ಲ ಅದ್ರಲ್ಲೂ ಜವರಾಯನ ಸರ್ಕಾರದಲ್ಲೂ ಕೆಲ್ಸ ಸಿಕ್ದೇ ಇರೋ ಜನಿವಾರ್ದೋರು, ಅವ್ರೇ ಪಾಪ ಮುಕ್ಕಾಲುಮೂರು ವೀಸೆ ಪಾಲು ಈ ಇಸ್ಕೋಲುಗಳ್ನ ನಡೆಸೋರೂನ್ನು ಆ ಪ್ರಾಣಿಗಳು ಹೊಟ್ಟೇ ಮೇಲೆ ವದ್ದೇ ಬಟ್ಟೇ ಹಾಕ್ಕೋಬೇಕೇ? ಆ ಮೇಡಮ್ಮಗಳೂ, ಮೇಷ್ಟ್ರುಗಳೂ ವಿಷ ಕುಡೀಬೇಕೇ?

ಮತ್ತಿನ್ನೂ ಎಷ್ಟು ಸೂಲಗಿತ್ತೀರಿಗೆ ನಿರುದ್ಯೋಗ? ಎಷ್ಟು ಜನ ತೊಟ್ಲು ಗಾಡಿ ತಯಾರ್ಸೋರಿಗೆ ಪಂಗನಾಮ? ಅಲ್ದೆ, ಬಟ್ಟೆ ಅಂಗ್ಡಿಯೋರು, ಬಣ್ಣದ ಕಾಗದ್ದೋರು, ಬೊಂಬೇ ಮಾರೋರು, ಬಿಸ್ಕತ್, ಪೆಪ್ಪರ್‌ಮೆಂಟ್‌ನೋರು,

ಆ ಮಂಜಿನ್ಕಡ್ಡಿ ಮಾರೋರು, ಬಳೆ, ಬಲೂನು, ಪೌಡರು, ಟೇಪು, ಕಡ್ಲೇ ಕಾಯಿ, ಕೈಪ್ಪು, ಗಿಲಕಿ, ಗಿರಗಿರದೋರೆಲ್ಲ ಯಾವ ನಗರಕ್ಕೆ ಹೋಗ್ಬೇಕು? ಕೊನೇಗೆ, ಬರಬರ್ತಾ ಆ 'ವೋಟ್ಕೊಡಿ, ಏಟ್ಕೊಡಿ' 'ಏನೇ ಬರ್ಲಿ, ಒಬ್ಬಟ್ಟಿರ್ಲಿ' ಅಂತ ಅದೇನೇನೋ ಕಿರುಚತ್ವಲ್ಲ, ಆ ಚಿಳ್ಳೆಗಳಿಗೇ ಕ್ವಾಮ ಬರುತ್ತಲ್ಲಾ!

ನೋಡಿದ್ಯಾ, ಇನ್ನೂ ಹೇಳ್ತಾ ಹೋದ್ರೆ ಎಷ್ಟೆಷ್ಟೋ ಇದೆ. ಮಕ್ಕಳ್ನ ರೇಷನ್ ಮಾಡಿದ್ರೆ, ಜನಗಳ ಹೊಟ್ಟೇ ತುಂಬುತ್ತೋ, ಹೊಟ್ಟೇ ಮೇಲೆ ಹೊಡ್ತಾ ಬೀಳುತ್ತೋ ಕೇಳು ಆ ಭಾಷಣ ಮಾಡೋಕ್ಷಿಲ್ಲ!"

ಹೇಗಿದೆ, ಅಜ್ಜೀ ಲಾಜಿಕ್ಕು?

—ಸುನಂದಮ್ಮ.




ಏನ್ರೀ, ಬಸ್ಸು ಬಂದು ಹೋಯಿತೇ?

# ಇಂದು—ನಾಳೆ

ಇಂದು ಇವ ನಿನ್ನವನು; ಇಡುವ ಹೆಗಲಲಿ ಕೈಯ
ಚಿನ್ನದಂತಹ ಗೆಳೆಯ............ಹುಚ್ಚು! ಬೇಡ!
ನಾಳೆ ಅವ ಕೊಟ್ಟಾನು, ಕೊರವು, ಹಗಲಲಿ ಕೈಯ
ಮುನ್ನವೇ ಎಚ್ಚರಿಕೆ............ನೆಚ್ಚಬೇಡ!

*　　　　*　　　　*

ಇಂದು ಇವ ಕಡು ವೈರಿ, ಕೆಟ್ಟವನು, ಬಲು ಕುಹಕಿ
ಕನ್ನ ಹಾಕುವ ಕಳ್ಳ............ಪೂರ ಕೇಡಿ!
ನಾಳೆ ಅವನೇ ನಿನ್ನ ಬಾಳ ಬೆಂಗೋಲಾಗಿ
ಅನ್ನವನು ಇತ್ತಾನು ದೂರಬೇಡಿ!

—ನಾ ಕ.

—೦—



ಈ ಪಾರ್ಟಿ ಅಧಿಕಾರಕ್ಕೆ ಬಂದರೆ!! ಈ ಗಾಡಿ ಹಾಗೇ ನಿಂತು ಕಾಂಟಿನ್ಯೂಯುತ್ತೇನೋ!!

# ಏರು—ಪೇರು

" ಆ ಹುಡುಗನೊಂದಿಗೆ ಆಡೋದು ಬೇಡವೋ !
ಜಾಹುಗಳ ಕಡಿದೇನು! ಕುವರ ರತ್ನಾ ! "

*　　　　*　　　　*

" ಆತನೆನ್ನಯ ಗೆಳೆಯ ! ಸುಗುಣ ಗಂಭೀರ !
ಮಾತನಾಡಲು ಆವನು ಬಲು ಜಾಣ ! ಧೀರ !"

*　　　　*　　　　*

" ಇರಬಹುದು ; ಆದರೂ, ಅವನ ಕುಲ, ಹೀನ !
ನಮ್ಮ ಕುಲ ಸಿರಿವಂತ, ಧರ್ಮದಲಿ ಲೀನ !"

*　　　　*　　　　*

" ಏಕಪ್ಪ ? ಹುಡುಗನಲಿ ಲೇಶ ದೋಷವು ಇಲ್ಲ "

*　　　　*　　　　*

ಹಾಕ್ಯೇನು ಎರಡೇಟು ! ತುಂಟತನ ಸಲ್ಲ
ಅವನಪ್ಪ ನನ್ನಂತೆ ವ್ಯಾಪಾರಿ, ಹೌದು ;
ನೋಡು ನಾ ಹೋಲ್ಸೇಲು, ಅವ ಬರೀ ಚಿಲ್ರೆ !"

— ಪಾಟಾಳಿ.



# ನನಗೆಬಂದ ಕಾಗದಗಳು

(ಹಾ. ರಾ.)

(೧)

**ಕೇರೂರು ಶಂಕರನಾರಾಯಣರಾಯರಿಗೆ—**

ಭೀಮಯ್ಯನು ಮಾಡುವ ನಮಸ್ಕಾರಗಳು : ನನಗೆ ಕಾಂಗ್ರೆಸ್ ಟಿಕೆಟ್ ಮೊದಲು ಸಿಗಲಿಲ್ಲ. ಆಮೇಲೆ ಸಿಗ್ತು ! ಖುದ್ದು ಹೋಗಿ ರಂಗೇಗೌಡನ ಹೆಸರಿನ ಮೇಲೆ ಬರೆ ಎಳೆಸಿದೆ. 'ನಿನಗೆ ಮುನ್ಸಿಪಾಲ್ಟಿಯೇ ಗತಿ' ಎಂದು ಅವತ್ತು ರಂಗೇಗೌಡ ಗೋವಿಂದಶೆಟ್ಟರ ಅಂಗಡಿ ಮುಂದೆ ನನ್ನನ್ನು ಹಂಗಿಸದೆ ಇದ್ದಿದ್ದರೆ ನಾನು ಬೆಂಗಳೂರಿಗೆ ಹೋಗಿ ಇಷ್ಟೊಂದು ದುಡ್ಡು ಖರ್ಚು ಮಾಡುತ್ತಲೇ ಇರಲಿಲ್ಲ ! ಅಂತೂ ಚುನಾವಣೆಗೆ ನಿಂತುಕೊಂಡುಬಿಟ್ಟಿದ್ದೇನೆ. ದೇವರ ಕೃಪೆ ಹೇಗಿದೆಯೋ ನೋಡಬೇಕು. ನೀವು ನಿಮ್ಮ ಘನವಾದ ಓಟನ್ನು ಯೋಗ್ಯನೂ, ಸಭ್ಯನೂ ಆದ ನನಗೇ ಕೊಟ್ಟು ಕಾಪಾಡುವುದಲ್ಲದೇ ನಿಮ್ಮೂರಿನಲ್ಲಿ ನನಗೋಸ್ಕರ ಪ್ರಚಾರ ಕಾರ್ಯವನ್ನು ನಡೆಸಬೇಕೆಂದು ಬೇಡಿಕೊಳ್ಳುತ್ತೇನೆ. ನಿಮ್ಮ ಬೆಂಬಲವನ್ನಪೇಕ್ಷಿಸುವ ಈ ಸಮಯದಲ್ಲಿ ನಾನು ಕೆಲವು ವಿಷಯಗಳನ್ನು ಒತ್ತಿ ಬರೆಯಬೇಕಾಗಿದೆ. ಇನ್ನು ಮುಂದಾದರೂ ನಾವು ಅನ್ಯೋನ್ಯರಾಗಿ ಬಾಳಬೇಕೆಂಬುದೇ ನನ್ನ ಆಶೆ. ನಡೆದುಹೋದ ಘಟನೆಗಳಿಗೆ ನಾವು ಇಂದು ಪಶ್ಚಾತ್ತಾಪ ಪಡಬೇಕೇ ಹೊರತು, ಪ್ರತೀಕಾರದ ಮನೋಭಾವ ತಾಳಬಾರದು! ಶಿಡ್ಲಘಟ್ಟದ ಪ್ರಕರಣವನ್ನು ನೀವು ಈ ಸಮಯದಲ್ಲಿ ಯಾರೊಬ್ಬರಿಗೂ ಹೇಳುವುದಿಲ್ಲವೆಂದು ನಂಬಿರುತ್ತೇನೆ ಅದೂ ಅಲ್ಲದೆ ರಮಾಬಾಯಿ ಈಗ್ಗೆ ಒಂದು ತಿಂಗಳು ಹಿಂದೆಯೇ ಮನೆ ಬಿಟ್ಟು ಓಡಿಹೋದಳು. ನಾಟಕದ ಪ್ರಹ್ಲಾದನಿಗೂ ಸಮಾಧಾನ ಹೇಳಿ ಅವನನ್ನು ನನ್ನ ಕಡೆಗೇ ತಿರುಗಿಸಿ. ಅಂದು ಅವನು ನನ್ನ ಮೇಲೆ ಪಾದರಕ್ಷೆ ಪ್ರಯೋಗಿಸಿದಾಗ ತೀರಾ ಕತ್ತಲೆಯಾಗಿದ್ದಿತು ನನ್ನ ಅದೃಷ್ಟ ಆದ್ದರಿಂದ ಈ ವಿಚಾರಗಳು ಯಾರಿಗೂ ತಿಳಿಯದಂತೆ ನನ್ನ ಬಗ್ಗೆ ಒಳ್ಳೇ ಪ್ರಚಾರವನ್ನು ನಿಮ್ಮೂರಿನಲ್ಲಿ ಮಾಡುತ್ತೀರಾಗಿ ನಂಬಿರುವ

ನಿಮ್ಮ ವಿಶ್ವಾಸಿ

**ಭೀಮಯ್ಯ, L. A. C.**

**(Legislative assembly candidate)**

(೨)

ಶ್ರೀ ಶಂಕರನಾರಾಯಣರವರಿಗೆ—

ಹಳಸಿಂಗೇಗೌಡರ ಶರಣಾರ್ಥಿ. ನೀವು ಯಾವತ್ತೂ ನನಗೆ ಗುರುಗಳು. ನನಗೆ 'ಆಟ, ಊಟ, ಕಲಿಸಿ ಮೂಗರ್ಜಿ' ಬರೆಯುವ ಮಟ್ಟಕ್ಕೆ ತಂದು ನನಗೆ ಬದುಕುವ ದಾರಿ ತೋರಿಸಿ ಕೊಟ್ಟಿರಿ! ಇವತ್ತಿನ ಈ ಭಾಗ್ಯ ಈ ಹುಮ್ಮಸ್ಸು ಎಲ್ಲಾ ನಿಮ್ಮ ವರ ಪ್ರಸಾದ! ನನ್ನ ಸ್ಕೂಲು ದಿವಸಗಳಲ್ಲಿ ಯಾವಾಗಲೂ ನನ್ನನ್ನು 'ಮುಡ್ಡಿ' ಎಂದು ಕರೆಯುತ್ತಿದ್ದುದು ನನಗೆ ಚೆನ್ನಾಗಿ ಜ್ಞಾಪಕವಿದೆ. ನಿಮ್ಮ ಪ್ರಶ್ನೆಗಳಿಗೆ ನಾನು ಉತ್ತರ ಕೊಡುತ್ತಿದ್ದ ರೀತಿಯನ್ನು ನೋಡಿ ನೀವೇ ಒಂದು ದಿವಸ 'ನೀನು ಮುಂದೆ ಅಸೆಂಬ್ಲಿ ಮೆಂಬರಾಗುತ್ತೀಯ ಕಣೋ' ಅಂತ ಅಂದಿದ್ದಿರಿ! ಇಂದು ನಿಮ್ಮ ಶಿಷ್ಯ ನಿಮ್ಮ ಮಾತನ್ನು ಸತ್ಯ ಮಾಡಲು ಹೊರಟಿದ್ದಾನೆ. ನಾನು 'ಸ್ವತಂತ್ರ'ನಾಗಿ ನಿಂತುಕೊಂಡಿದ್ದೇನೆ. ನನ್ನ ಅಭಿಪ್ರಾಯಗಳು ಎಂದೂ ಇತರರ ಅಭಿಪ್ರಾಯಗಳಿಗೆ ಹೊಂದಿಕೊಳ್ಳುವುದಿಲ್ಲ! ಆದ್ದರಿಂದ ನನಗೆ ಯಾವ ಪಾರ್ಟಿಯೂ ಬೇಡ. ನಿಮ್ಮೂರಿನ ಜನಗಳು ನನಗೇ ಓಟು ಕೊಡುವಂತೆ ಪ್ರೇರೇಪಿಸುತ್ತೀರಾಗಿ ನಂಬಿರುತ್ತೇನೆ. ಇಲ್ಲಿಗೆ ನೀವು ಗುರುಗಳಾಗಿದ್ದಕ್ಕೆ ಸಾರ್ಥಕವಾಗುತ್ತದೆ! ನನ್ನ ಚುನಾವಣೆ ಚಿಹ್ನೆ ಕೈ. ಆದ್ದರಿಂದ ತಾವು ಕೈಗೇ ಓಟು ಕೊಡಬೇಕು ಆದರೆ ಕೈ ಕೊಡಬಾರದು! ಹೀಗೆಂದು ನೀವು ನಿಮ್ಮೂರಿನವರಿಗೆ ಹೇಳುತ್ತೀರೆಂದು ನಂಬಿರುವ

ಇತಿ ನಿಮ್ಮ ನೆಚ್ಚಿನ ಶಿಷ್ಯ,

ಹಳಸಿಂಗೇಗೌಡ.

(೩)

ಮಾ॥ ಶ್ರೀ ಶಂಕರನಾರಾಯಣರಿಗೆ

ಉಭಯ ಕುಶಲೋಪರಿ ಸಾಂಪ್ರತ- ಭಗವಂತನು ನಿಮಗೆ ಇದುವರೆಗೂ ಆಯುರಾರೋಗ್ಯ ಕೊಟ್ಟು ಕಾಪಾಡಿಕೊಂಡು ಬರುತ್ತಿರುವ ಸಮಾಚಾರ ತಿಳಿಯಿತು. ಪ್ರಕೃತ ನಾನು ಅಸೆಂಬ್ಲಿಗೆ ಉಮೇದುವಾರನಾಗಿ ನಿಂತುಕೊಂಡಿರುವ ಸಮಾಚಾರ ನಿಮಗೆ ತಿಳಿಯದೆ ಇಲ್ಲ. ನಿಮ್ಮೂರಿಗೆ ನೀವು ಗಣ್ಯ ವ್ಯಕ್ತಿಗಳಾಗಿದ್ದೀರಿ. ನಿಮ್ಮ ಮಾತು ನಡೆಯುತ್ತದೆ. ನೀವು ನಿಮ್ಮೂರಿನ ಜನಗಳಿಗೆ ಒತ್ತಿ ಹೇಳಿ ಅವರ ಓಟುಗಳನ್ನು ನನಗೇ ಕೊಡಿಸಬೇಕೆಂದು ಅತಿ ವಿನಯದಿಂದ ಬೇಡಿಕೊಳ್ಳುತ್ತೇನೆ. ಮೊನ್ನೆ ರಾಮುಸ್ವಾಮಿಗಳು ನಿಮ್ಮೂರಿಗೆ ಬಂದಿದ್ದಾಗ ಅವರೊಂದಿಗೆ ನನ್ನ ವಿಚಾರ ಪ್ರಸ್ತಾಪ ಮಾಡಿದತೆಂದು ತಿಳಿಯಿತು. ಈ ಲೇವಾದೇವಿ ವಿಚಾರಗಳೇ ಹಾಗೆ! ನಾವೇನು ಮಾಡಲಿ. ಅವತ್ತು ಅದೊಂದು

ವಿಷಘಳಿಗೆ. ನಾನು ನಿಮ್ಮನ್ನು ಹೀನಾಯವಾಗಿ ಬೈದೆ. ನೀವೂ ಕೊಡೆದಾಡಲು ಬಂದಿರಿ! ಕಡೆಗೆ ನಾನೇ ಸೋತು ಶೇ|| ಹದಿನಾರರಂತೆಯೇ ಬಡ್ಡಿ ತೆಗೆದುಕೊಂಡು ಫೈಸಲ್ ಮಾಡಿಕೊಂಡಿದ್ದು, ನೀವು ಮರೆತಿಲ್ಲವೆಂದು ನಂಬಿರುತ್ತೇನೆ. ನಿಮ್ಮನ್ನು ಕೈ ಬಿಡಬಾರದು ಎಂದೇ ನಾನು ಆವತ್ತು ಶೇಕಡ ನಾಲ್ಕು ರೂ ಬಡ್ಡಿ ಸೋಡಿ ಕೊಟ್ಟೆ. ಇನ್ನೊಂದು ಸಲ ಬೇಕಾದಾಗ ಕೇಳಿ. ಹಣ ಖಂಡಿತ ಕೊಡುತ್ತೇನೆ! ನೀವು ನನ್ನ ಬಗ್ಗೆ ಪ್ರಚಾರವನ್ನು ಇಂದಿನಿಂದಲೇ ಆರಂಭಿಸುತ್ತೀರಾಗಿ,

ನಂಬಿರುವ ನಿಮ್ಮ ಹಿತೈಷಿ,
ಸಾಹುಕಾರರ ಪುಟ್ಟಣ್ಣ ಶೆಟ್ಟಿ,
"ತಿರುಪತಿನಿಲಯಂ"

(೪)

ಶ್ರೀ ಶಂಕರನಾರಾಯಣರವರಿಗೆ—

ಮೊನ್ನೆ ನಿಮ್ಮೂರು ನಾಗರುಕಲ್ಲು ಅರಳೀಮರದ ಬಳಿ ಭೀಮಯ್ಯನ ಕಡೆಯವರು ಓಟಿನ ಪ್ರಚಾರ ಮಾಡುತ್ತಾ ನನ್ನನ್ನು ಖೂನಿ ಮಾಡುತ್ತೇವೆ ಎಂದರಂತೆ! ನನ್ನನ್ನು ಕೇವಲ ಕುಡುಕ ಎಂದು ಮಾತ್ರ ಪ್ರಚಾರ ಮಾಡಿದ್ದು ತುಂಬಾ ವಿಷಾದ ಅಲ್ಲಿಯೇ ಇದ್ದ ನಮ್ಮ ಕೆಂಚು ಇದನ್ನೆಲ್ಲ ನನಗೆ ಬಂದು ಹೇಳಿದ. ಈ ರೀತಿ ನನ್ನ ಬಗ್ಗೆ ನಿಮ್ಮೂರಿನಲ್ಲಿ ಅಪಪ್ರಚಾರವಾಗದ ಹಾಗೆ ತಾವು ನೋಡಿಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ. ನಿಮ್ಮ ಕಡೆಯವರ ಓಟುಗಳನ್ನು ನನಗೇ ಕೊಡಿಸಿಕೊಡುತ್ತೀರಾಗಿ ನಂಬುವ,

ಇತಿ ನಿಮ್ಮ ಸೇವಾಕಾಂಕ್ಷಿ,
ವೆಂಕಟಾಚಲಯ್ಯ,
ಕ್ಯಾಂಪ್ ಅಂಚೇಪಾಳ್ಯ.

(೫)

ಶ್ರೀ ಶಂಕರನಾರಾಯಣರವರಿಗೆ

ಕೆ. ಎಂ. ಪುಟ್ಟಯ್ಯನ ವಿಜ್ಞಾಪನೆಗಳು: ನಮ್ಮ ಕ್ಷೇತ್ರದಲ್ಲಿ ಪೈಪೋಟಿ ಬಲು ಜೋರಾಗಿರುವ ವಿಚಾರ ತಮ್ಮ ಗಮನಕ್ಕೆ ಬರದೆ ಇಲ್ಲ! ನೀವು ಕಂಡ ಹಾಗೆ ಅಸೆಂಬ್ಲಿಗೆ ನಮ್ಮ ಕ್ಷೇತ್ರದಲ್ಲಿ, ಇದೇ ಮೊಟ್ಟಮೊದಲನೆಯ ಬಾರಿಯಾಗಿ ನಿಂತಿರುವವನು ನಾನೊಬ್ಬನೆ! ಬಾಕಿಯವರೆಲ್ಲ ಈ ಉದ್ಯಮದಲ್ಲಿ ಹಳೆ ಹುಲಿಗಳು. ಈ ಒಂದು ಕಾರಣದಿಂದಲಾದರೂ ನೀವು ನನಗೆ ಸಂಪೂರ್ಣ ಬೆಂಬಲ

ನೀಡಬೇಕು. ಅದೂ ಅಲ್ಲದೆ ನಾನು ಬಾಕಿಯವರಂತೆ ಈಗಾಗಲೇ ಅಷ್ಟು ತೀರ ಹಲ್ಲ ಎಂದು ಅನ್ನಿಸಿಕೊಂಡಿಲ್ಲ. ಈಗಾಗಲೇ ಎಷ್ಟೋ ಸಾರ್ವಜನಿಕ ಸಂಸ್ಥೆಗಳಿಗೆ ಕಲ್ಲು ಹಾಕಿರುವ ಭೀಮಯ್ಯನಿಗೇ ಈ ಸಾರಿಯೂ ಬೆಂಬಲ ನೀಡುವುದು ದೇಶಕ್ಕೆ ಹಾನಿಕರ. ಒಬ್ಬನಿಗೇ ಇಂತಹ ಅವಕಾಶವನ್ನು ಮತ್ತೆ ಮತ್ತೆ ಕಲ್ಪಿಸಿ ಕೊಡುವುದು ಪ್ರಜಾಹಿತ ದೃಷ್ಟಿಯಿಂದ ಒಳ್ಳೆಯದಲ್ಲ! ನಾನು ಆರಿಸಿ ಬಂದರೆ ನಾನೇನು ಭೀಮಯ್ಯನಿಗೆ ಕಡಿಮೆಯಾಗುವುದಿಲ್ಲ. ಈ ನನ್ನ ಯೋಗ್ಯತೆಗಳನ್ನು ನಿಮ್ಮೂರಿನವರಿಗೆ ಹೇಳಿ ಎಲ್ಲರ ಓಟುಗಳನ್ನೂ ನನಗೇ ಕೊಡಿಸಿ ಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

ಇತಿ ನಿಮ್ಮ ವಿಶ್ವಾಸಿ,

**ಎ. ಎಂ. ಬಿ.**

**ಸಂಪಾದಕರೆ—**

ಇತ್ತೀಚೆಗೆ ನನಗೆ ಬಂದ ಕಾಗದಗಳಲ್ಲಿ ಕೆಲವನ್ನು ನಿಮ್ಮ ಅವಗಾಹನೆಗೆ ಕಳಿಸಿದೇನೆ. ಅವುಗಳನ್ನು ಬರೆದವರು ನಾವೇ ಎಂದು ಯಾರೂ ಒಪ್ಪಿಕೊಳ್ಳುವುದಿಲ್ಲವಾದ್ದರಿಂದ ನೀವು ಆ ಕಾಗದಗಳನ್ನು ಧೈರ್ಯವಾಗಿ ಪ್ರಕಟಿಸಬಹುದು. ಆದರೆ ಇನ್ನೂ ಕೊಂಚ ದಿವಸ ನನ್ನ ಅಡ್ರೆಸ್ ಮಾತ್ರ ಯಾರಿಗೂ ತಿಳಿಸಬೇಡಿ.

ಇತಿ ನಿಮ್ಮವ,

**ಶಂಕರನಾರಾಯಣ.**



ಒಂದು ನಿಮಿಷ ನಗಿ ಆಮೇಲೆ ಯಥಾಪ್ರಕಾರ . ಇರುವಿರಂತೆ.

 ## ಮಡೆಯ ! 

---

ಏನು ಕುಣಿತ ಕುಣಿದೀರಣ್ಣಾ
ಒಣಜನಗಣ ಮುಂದೆ!
ಎಂಥ ನಟನೆ ನಾಟಕವಣ್ಣಾ
ಎಲ್ಲರ ಕಣ್ಮುಂದೆ!! ||ಪಲ್ಲವಿ||

ಏನು ಮಾಟ ಮಾಡುವಿರಣ್ಣಾ,
ಏನೇನಾಟ ಆಡುವಿರಣ್ಣಾ,
ಎಂಥ ಟೋಪಿ ಹಾಕುವಿರಣ್ಣಾ,
ಕುತಂತ್ರ ವಾದವ ಮಾಡುತಲಿ,
ಸ್ವತಂತ್ರ ವಾದದ ಸೋಗಿನಲಿ!! || ಏನು ಕುಣಿತ ||

ಮಂತ್ರವಾದದ ಮಾಯಣ್ಣಾ,
ತಂತ್ರವಾದದ ತಮ್ಮಣ್ಣಾ,
ಕಂತ್ರೀ ಕ್ಲಾಸಿನ ಕಾಮಣ್ಣಾ,
ಏನೇನಾಟವ ಆಡುವಿರಣ್ಣಾ
ಸ್ವತಂತ್ರ ವಾದದ ಸೋಗಿನಲಿ,
ಕುತಂತ್ರವಾದವ ಮಾಡುತಲಿ! ||ಏನು ಕುಣಿತ||

ನಿಮ್ಮ ಕಾಟವ ತಡೆಯೆವು ಅಣ್ಣಾ,
ನಮ್ಗೊಂದೋಟು ಬೇಕೇನಣ್ಣಾ?
ಕೊಟ್ಟರೆ ಕಾಟ ತಪ್ಪುವುದೇನಣ್ಣಾ?
ಕೊಟ್ರೂ ಕಾಟ; ಬಿಟ್ರೂ ಕಾಟ;
ಬಂದರೆ ನೀವು ಆಡಿದ ಆಟ;
ಎಂದಿಗು ತಪ್ಪದು ನಮಗೀ ಕಾಟ;
ತಪ್ಪುವುದೊಂದೊಪ್ಪತ್ತಿನ ಊಟ!
ಎಂಬುದೆ ನಾವು ಕಲಿತಿಹ ಪಾಠ!! ||ಏನು ಕುಣಿತ||

ಸತ್ಯ ಅಹಿಂಸೆ ಸೇವಾ ಸಂಯಮ
ತತ್ವಗಳೆಲ್ಲಾ ನಿಮಗೇ ಮೀಸಲು!
ಎಲ್ಲಕು ನೀವೇ ಸೇವೆಯ ಸಲಿಸಲು,—

ಹೊಟ್ಟೆಗೆ ಬಟ್ಟೆಗೆ ನಿಲ್ಲಲು ನೆರಳಿಗೆ
ಬೇಡಿರಿ ನಮ್ಮನು ನೀಡುವೆವೆಲ್ಲನು ”
ಎಂಬೀ ಹರಟೆಯು,
ಧೋರಣೆ ಕೊರಟೆಯು,
ಓಟನ ತವಾಟೆಯು,
ನಿಲ್ಲಿಸಿ; ಹಾಕಿರಿ
ಬಾಯಿಗೆ ಬಿರಟೆಯು!

ಕೊಡುವವನವನು
ಬಿಡುವವನವನು—
ವಿಶ್ವದ ಒಡೆಯು,
ಇದನರಿಯದಿಕೆ
ನೀ ಬಲು ಮಡೆಯು!!

॥ಏನು ಕುಣಿತ॥

— ಬುಳ್ಳ.



ಪೈಲ್ವಾಂ:— ಎಂಥಾ ತಿಂಡಿ ಕೊಟ್ಟರೂ ತಿನ್ನೊಲ್ಲ ಡಾಕ್ಟರೇ!
ಕೆಳಗೆ ಬಿಟ್ಟರೆ ಬರೀ ಮಣ್ಣು ತಿನ್ನುತ್ತೆ.

ಡಾಕ್ಟರು (ಇಂತಹದನ್ನು ಕೇಳಿ ಕೇಳಿ ಸಾಕಾದವ)— ಆದಲ್ಲಾ ಮುಂಬರುವನ್ನು
ನೋಡಿಸುತ್ತಾ ದೇವರು ಹುಗಿನಿಂದಲೇ ಮಕ್ಕಳಿಗೆ ಕಯಾಂ ಕೊಡ್ತಾನೆ,
ಹಾಗೂ ನಾಸ್ತ್ರಾಗಬಹುದು.

# ಉದ್ಧಾರಕರ ವದ್ಯಾಟ

"ವರ್ಷದ ಕೊನೆ ಸಮೀಪಿಸುತ್ತಲೆ ಉಳಿದ ರಜಕ್ಕೆ ಅನ್ಯಾಯ ಮಾಡಬಾರದೆಂದು ಮೂರು ದಿನದಿಂದ ಮನೆಯಲ್ಲೇ ಮಂಡಿಸಿದ್ದೆ. ನನಗೆ ಬೇಡವಾದರೂ ಆಫೀಸರ ಕಣ್ಣಿಗೆ ತಂಪುಂಟುಮಾಡಲು ಬಿಟ್ಟು ಬಿಡದೆ ಕೆತ್ತುತ್ತಿದ್ದ ನಾನು ಪಾಪ ಎಂದು ಷೇವಿಂಗ್ ಸೆಟ್ಟಿಗೂ ರಜ ಕೊಟ್ಟಿದ್ದೆ. ಆ ಕಾರಣ ಮೂರು ದಿನದ ಬೆಳೆ ಮುಖದ ಮೇಲೆ ಮೂಡಿತ್ತು. ಆ ಮುಂಜಾನೆ ವರಾಂಡಾದಲ್ಲಿ ಕಾಫಿ ಮುಗಿಸಿ ಆರಾಂ ಕುರ್ಚಿ ಮೇಲೆ ಕೂತಿದ್ದೆ. ಮೀನಾಕ್ಷಿ ಎದುರಿಗೆ ಚಾಪೆ ಮೇಲೆ ಕೂತು ಅಡಿಕೆ ಕತ್ತರಿಸುತ್ತಿದ್ದಳು. ಬೆಳೆದ ಗಡ್ಡ ಬೆನ್ನು ತೂತಾದ ನೆಟ್ ಬನೀನು-ಒಮ್ಮೆ ಅಚ್ಚ ಬೆಳ್ಳಗಿದ್ದು ಈಗ ಹಗುರಾದ ಕಾಫಿ (ಲೈಟ್ ಕಾಫಿ) ಬಣ್ಣಕ್ಕೆ ತಿರುಗಿದ ಪೈಜಾಮಾ ಹಾಕಿ ಹಳೆಯ ಕೊರಪಂಜಿಯನ್ನು ಹಿಡಿದು ಮೀನಾಕ್ಷಿಯನ್ನು ನೋಡತೊಡಗಿದ್ದೆ. ಮೀನಾಕ್ಷಿಯ ಅಚ್ಚ ಕೆಂಪು ರೇಷ್ಮೆಯ ಚೋಳಿ ತೋಳನ್ನು ಬಿಗಿಯುತ್ತಿತ್ತು. ಕೇಸರಿ ಬಣ್ಣದ ಗರಿಗರಿಯಾದ ಜಾರ್ಜೆಟ್ ಉಟ್ಟಿದ್ದಳು. ತುಂಬು ರೇಷ್ಮೆಯ ನಿಜಕ್ಕೂ ಮೀನಿನಂತಹ ಬಟ್ಟಲು ಕಣ್ಣು ಬಿಟ್ಟು ದಿಟ್ಟಿಸಿ ಒಂದೇ ಸಮನೆ ವರಾಂಡದ ಹೊಸಿಲು ನೋಡುತ್ತಿದ್ದಳು. ಸಡಿಲಾಗಿ ಬಿಗಿದ ಕೇಶರಾಶಿಯ ತುರುಬಲ್ಲಿ ಎಲೆಮೊಗ್ಗು ಸಮೇತ ನಾಲ್ಕು ಜಾಜಿ ಹೂವು ಸಿಕ್ಕಿ ಹಾಕಿಕೊಂಡಿತ್ತು. ನವಿರಾಗಿ ಬಳಿದ ಪೌಡರ್ ಅವಳ ಸುಂದರ ವದನದ ಸೌಂದರ್ಯವನ್ನಿಮ್ಮಡಿಸಿತ್ತು- ಕೆಂಪು ತುಟಿ ಆ ಮಾಟವಾದ ಬಾಯಿ ಅಬ್ಬ ಇಷ್ಟೆಲ್ಲ ನೋಡುತ್ತಿದ್ದಂತೆ ಆ ಹರಿತವಾದ ನಾಲಿಗೆಯ ನೆನಪು ಬಂದು "ಇಷ್ಟು ಸುಂದರಿಗೆ ಇಂತಹ ನಾಲಿಗೆಯೇ? ನನ್ನ ಕತ್ತು ಸುತ್ತು ಬಿದ್ದ ಈ ನಾರಿಯ ನಾಲಿಗೆ ಕೊಂಚ ಮೊಂಡಿದ್ದಿದ್ದರೆ ನನ್ನ ಸಮಾನ ಪುಣ್ಯವಂತರಿರುತ್ತಿರಲಿಲ್ಲ..........." ಎಂದು ಕನಸು ಕಾಣುತ್ತಿದ್ದಂತೆಯೇ ಮೀನಾಕ್ಷಿ ನನ್ನ ಕಡೆ ನೋಡಿದಳು. ತುಟಿ ಸರಿಮಾಡಿಕೊಂಡು ಬಾಯಿ ಬಿಟ್ಟುಬಿಟ್ಟಳು.

"ಈಗಲೂ ಬ್ಲೇಡಿಗೆ ಬಂದ ಬ್ಯಾನ್ ಹೋಗಿಲ್ಲೇನು?....... ....ಇದೇನು ನಿಮ್ಮ ಅವತಾರ.. .... ..." ಎಂದು ಕೇಳೇಬಿಟ್ಟಳು. ನಾನು ಗಡ್ಡ ಸವರಿಕೊಳ್ಳುತ್ತಾ "ಇಲ್ಲ ನಮ್ಮಪ್ಪನಿಗಾದರೂ ಬರಿಯೋಣ-ನಿಮ್ಮ ಅಳಿಯಂದಿರಿಗೆ ವರೋಪಚಾರದ ಜೊತೆಗೆ ಒಂದು ಬ್ಲೇಡು ಪ್ಯಾಕೆಟ್ಟು ಕೊಡಲಿಲ್ಲವಂತೆ.... .... ಅದಕ್ಕೆ ಕ್ಷೌರವಿಲ್ಲದೆ ಮುನಿದುಕೊಂಡಿದ್ದಾರೆ ಎಂದು ಬರಿಯೋಣಾಂತ ಕೇಳಿದೆ......." ಎಂದು ಕುಟುಕಿದಳು. ನಾನೇಕೆ ಸುಮ್ಮನಿರಲಿ?

"ಮೀನೂ....ನಿನ್ನೆ ನನಗೆ ಗಂಟು ಹಾಕಿದ್ದೀ ಒಂದು ಸಾವಿರ ಬ್ಲೇಡು ಕೊಟ್ಟ ಹಾಗಾಗಿದೆ ಇನ್ನು ಬೇರೇ ಅವರು ಕಳಿಸಬೇಕೇನು........ಈ ನನ್ನ ನೆಟ್ ಬನೀನು ನೋಡು-ನಿನ್ನ ರೇಷ್ಮೆ ಜೋಳಿ ನೋಡು ...ಈ ಪೈಜಾಮಾ ಎಲ್ಲಿ ಆ ಜಾರ್ಜೆಟ್ ಎಲ್ಲಿ....ಆ ಮಾವಿನ ಕಾಯಿ ಸರ...." ಎಂದು ಹೇಳುತ್ತಿದ್ದಂತೆಯೇ ...ಮಧ್ಯ ಅವಳು ಬಾಯಿ ಹಾಕಿ "ಸಾಕು ಸಾಕು....ನಮ್ಮಪ್ಪ ಕೊಟ್ಟ ಮಾವಿನ ಕಾಯಿ ಸರಕ್ಕೂ ನಿಮ್ಮದೇಂತನ್ನೋ ಮುದ್ರೆ ಬೇಡ.... ಸಾಕು ಸಧ್ಯ ಆ ಮುಖ ನೋಡಲಾರೆ ...ಮ್ಯಾಟ್ನಿಗೆ ಹಂಗನಾಮಕ್ಕೆ ಹೋಗೋದೂಂತ ನಿನ್ನೆ ರಾತ್ರಿಯೇ ತೀರ್ಮಾನವಾಗಿರಲಿಲ್ವೆ? ಬೇಗ ಏಳಿ ಸಾಕು ನಿಮ್ಮ ಟೀಕೆ...." ಎಂದು ನನ್ನ ಮೇಲೆ ಟೀಕೆ ಮಾಡಿ ಮತ್ತೆರಡು ಒಡ ಅಡಿಕೆಗಳನ್ನು ಕಟಕಟನೆ ಅಡಕತ್ತರಿಯಲ್ಲಿ ಕತ್ತರಿಸೊಗೆದಳು. ಈ ಹೊತ್ತಿಗೆ ಸರಿಯಾಗಿ ಬರ್ ಎಂದು ಬಂದ ಪಾಂಟಿಯಾಕ್ ಕಾರು ನನ್ನ ಮನೆ ಮುಂದೇ ನಿಂತಿತು. ಇದ್ಯಾರು ನಮ್ಮ ಮನೆಗೆ ಕಾರಿನಲ್ಲಿ ಬರುವವರು ಎಂದು ಕಾತುರತೆಯಿಂದ ನೋಡಿದೆ. ಮುಂದಿದ್ದ ಅಡಿಕೆ ತಟ್ಟೆ ಹಿಡಿದು ನಡುಮನೆಗೆ ಧಾವಿಸುತ್ತಲೇ ಮೀನಾಕ್ಷಿ "ಹೋಗಿ ಷರಟಾದರೂ ಹಾಕಿಕೊಳ್ಳಬಾರದೇ........ಕಾರಿನಲ್ಲಿ ಬಂದವರು ಏನೆಂದುಕೊಂಡಾರು...." ಎಂದು ತನ್ನ ಯಜಮಾನರ ಅಂತಸ್ತು ಹೆಚ್ಚಿಸುವುದಕ್ಕಾಗಿ ಹೆಣಗಾಡುವವಳಂತೆ ಹೇಳಿದಳು. ಇಷ್ಟರಲ್ಲಿ ಕಾರಿನವರು ವರಾಂಡಕ್ಕೆ ಬಂದರು. "ಬನ್ನಿ ಬನ್ನಿ" ಎಂದು ಆಹ್ವಾನಿಸಿದೆ. ಗರಮಾಗರಂ ಗಾಂಧೀ ಟೋಪಿ ಇನ್ನೂ ಇಸ್ತ್ರೀ ಹೊಗೆ ಹೊರಹೊಮ್ಮುತ್ತಿತ್ತು. ಕರೀ ಷೇರ್ವಾನಿ, ಸುರಮಾ ಗಿರ್ಕಿ ಚಡಾವು, ಪಂಚೇರು ಭಾರದ ಲಕ್ಕ, ಪಾರ್ಶ್ವಗಳುಳ್ಳ ಹೊಚ್ಚಂ ಹೊಸ ಕನ್ನಡಕ, ಹೊಳೆವ ಹಳದೀ ಹಲ್ಲು ಹಾಯಿಸಿದ ಹಸನ್ ಮುಖದ ಜೊತೆಗೆ ಮುಗಿದ ಕೈಯ್ಯಲ್ಲಿನ ಕಿರುಬೆರಳ ಉಂಗುರದ ಥಳಥಳದೊಡಗೂಡಿ ವಾರಾಂಡದಲ್ಲಿ ಮಂಡಿಸಿದರು ಆ ಮಹಾನುಭಾವರು.

ಅವರ ಈ ಅಚ್ಚುಕಟ್ಟಿನ ಆಕಾರದ ಮುಂದೆ ನನ್ನ ತೂತು ಬಿದ್ದ ನೆಟ್ ಬನೀನು ನಾಚಿ ಮುದುಡಿಕೊಂಡಿತು. ಸಧ್ಯಕ್ಕೆ ಮೀನಾಕ್ಷಿ ಒಳಗಿಂದ ಬಿಳಿಯ ಟವಲೊಂದು ಎಸೆದಳು- ಹೊದ್ದು ಹರುಕ ಮುಚ್ಚಿಕೊಂಡೆ.

"ನೀವು ನಿಮ್ಮ ಮನೆಯವರು-ನಿಮ್ಮ ಸ್ನೇಹಿತರು ಎಲ್ಲಾ ನಮ್ಮ ಮೇಲೆ ಅಭಿಮಾನ ಇಡಬೇಕು" ಎಂದು ಅರೆವಿನಯದಿಂದ ಕೈ ಹೊಸೆದರು.

"ಅಯ್ಯೋ........ಅದಕ್ಕೇನು-ಏನು ವಿಷಯ"

"ತಮ್ಮ ಓಟು ನಮಗೇನ್ನೋದು ಗೊತ್ತು ಆದರೂ ಜ್ಞಾಪಿಸೋಣಾಂತ ಬಂದೆ" ಎಂದು ಕೈಲಿದ್ದ ಓಟರ್ಸ್ ಲಿಸ್ಟಿನಲ್ಲಿ ಹೆಸರು ತಡಕತೊಡಗಿದರು. ಈ

ವಿಷಯದಲ್ಲಿ ನಾನು ಖಂಡಿತವಾದಿ. ಸ್ವರಾಜ್ಯ ಬಂದ ಮೇಲೆ ನನ್ನ ಸ್ವಂತ ದ್ದ್ವಾಂತ ಬಂದಿರೋದು ನನಗೆ ಈ ಓಟು ಒಂದೆ. ಅದನ್ನೂ ಈತ ತನಗೇ ಕೇಳೋದು ಕಂಡು ಕೆಂಡವಾಗುವುದು ಸಹಜ ತಾನೆ?

"ಕ್ಷಮಿಸಿ–ನಿಮಗೆ ಯಾಕೆ ಓಟು ಕೊಡಬೇಕು ?" ಎಂದು ನೇರವಾದ ಪ್ರಶ್ನೆಯನ್ನು ಕೇಳಿದೆ.

"ನಮ್ಮ ಸಂಸ್ಥೆ–ಹಹಹ.. ....ಸಂಸ್ಥೆ ನೋಡಿ ಅದರ ಹಿರಿತನ–ಅದರ ಸೇವಕರಾದ ನಮ್ಮಿಂದ ತಮಗೆ ಕೇವಲ ಕೆಲವು ಉಪಕಾರ ಮಾಡಿಸಲು ಭಗವಂತ ಈ ಚುನಾವಣೆಗೆ ನಿಲ್ಸಿದಾನೆ ನನ್ನ.... ...... ಜನಸೇವೆ ಜನಾರ್ದನ ಸೇವೆ........" ಎಂದು ಆತ ಪ್ರಾರಂಭಿಸಿದಾಗಲೇ ನನ್ನ ಹರಿದ ನೆಟ್ ಬನೀನು ಕೋಪದ ಎಡೆಯ ಉಬ್ಬರವಿಳಿತಕ್ಕೆ ಸಿಕ್ಕಿ ತೂತು ದೊಡ್ಡದು ಮಾಡಿಕೊಳ್ಳ ತೊಡಗಿತು. ನಮ್ಮನ್ನು ಜನಾಂತ ಈತ ಕರೀತಾನಲ್ಲ ಏನು ಧೈರ್ಯ ಇವನದು. ಇಷ್ಟು ದಿನ ಮಾಡಿದ್ದು ದನ ಸೇವೆ–ಅದೇ ಧನಾರ್ಜನ ಸೇವೇಂತ ಮನದಟ್ಟು ಮಾಡಿಕೊಂಡಿರೋ ಜನ ಇವರು........ನನಗೆ ರೇಗಿತು. ಆದರೂ ಹೇಗೆ ಬಾಯಲ್ಲಿ ನೇರವಾಗಿ ಬೈಯ್ಯೋದು ?

"ಪ್ರೊಪಗ್ಯಾಂಡಾಕ್ಕೆ ಎಷ್ಟು ಖರ್ಚು ಬಿದ್ದಿದೆಯೋ ಪಾಪ ......" ಎಂದು ಕೇಳಿದೆ ಪಶ್ಚಾತ್ತಾಪ ಪಡೋ ಹಾಗೆ "ಪೋಸ್ಟರು, ಹ್ಯಾಂಡ್‌ಬಿಲ್ಲು, ಕಾರು, ಲೌಡ್‌ಸ್ಪೀಕರು, ಏಜೆಂಟ್ರು ಕಮಿಷನ್ನು........ಇದರಲ್ಲೇನು ಸುಖವೇನ್ರಿ ಕೆಲ್ಸ .......ನಾಲ್ಕು ಸಾವಿರ ಹತ್ತಿರ ಹತ್ತಿರ ಕೈ ಕಚ್ಚುತ್ತೆ........ಇಷ್ಟಾದರೂ ತಮ್ಮ ತಮ್ಮ ಸ್ನೇಹಿತರ ಬೆಂಬಲ ಬಿದ್ದು ಹೋದರೆ ನನ್ನ ಈ ಲೌಡ್‌ಸ್ಪೀಕಿನಿಂದ ಏನು ಉಪಯೋಗ.. ....?

"........ನಿಜವಾಗೂ ದನಸೇವೆಯಲ್ಲಿ ಜನಸೇವೇನ್ನೋದಾದರೆ ಮೆಂಬರಾಗೇ ಮಾಡಬೇಕೇನೂ........ಈ ನಾಲ್ಕು ಸಾವಿರ ಖರ್ಚು ಮಾಡಿ ನಂಬರಾಗಿ ಕುರ್ಚಿ ಕೊಡೊಕಿಂತ ಮನೇಲಿದ್ದೆ ತಲಾ ಇಪ್ಪತ್ತರಂತೆ ಅದೇ ದುಡ್ಡು ಕಡು ಬಡವರಿಗೆ ಹಂಚಿ ಹೆಸರೇಳ್ಕೊಂಡು ಹಾಲು ಕುಡೀತಾರೆ ನಾರಾಯಣ ಮೆಚ್ತಾನೆ........ಅದಕ್ಕಿಂತ ಸೇವೆ ಬೇಕೆ ?"

"ಹಿಹಿಹಿ ... ...ತಮಾಷೆ ಮಾಡ್ತೀರಿ........ನಿಮ್ಮ ಓಟು ನನಗೇತಾನೆ"

ತಮಾಷೆ ಏನ್ರೀ......ಹೋಗಲಿ ತೂರೋ ಹ್ಯಾಂಡ್‌ಬಿಲ್ ದುಡ್ನಲ್ಲಿ ನನಗೆರಡು ಜೊತೆ ನೆಟ್ ಬನೀನು ಬರ್‍ತಿತ್ತಪ್ಪ......ಅದಾದರೂ ಮಾಡ್ರಿ ಓಟು ಕೊಡ್ತೀನೀ........."

"ಹಿಹಿಹಿಹಿಹಿ......ನೆನಪಿರಲಿ......ಬರ್ತೀನಿ......ಮ ರೀ ಬೇ ಡಿ........ ಬಕೆಟ್ ಗುರ್ತಿಗೇ ಓಟು ಹಾಕಿ........ಹಿಹಿಹಿ..........." ಎಂದು ದೇಶಾವರಿ ನಗುವಿನೊಡನೆ ಭೆಂಯ್ ಎಂದು ಕಾರು ಬಿಟ್ಟುಕೊಂಡು ಹೋಗೇಬಿಟ್ಟ.

ನನ್ನ ಈ ವರ್ಣನೆಯಿಂದ ಮೀನಾಕ್ಷಿ ಮುನಿದು ಹೋದಳು. "ಹಾಗೇಕೆ ಅಂದು ಕಳಿಸಿದಿರಿ ಅವರಿಗೆ.. ....ಮಹಾ ಓಟು ಕೈಲಿ ಹಿಡ್ಕೊಂಡು ಹುಡುಗರಿಗೆ ಮಿಠಾಯಿ ತೋರ್ಸ್ತಾ ಹಾಗೆ ಮಾಡ್ತೀರಿ....ಮತ್ತೆ...." ಎಂದು ಇನ್ನೇನೋ ಹೇಳಲು ತೊಡಗುತ್ತಿದ್ದಂತೆಯೇ ಮತ್ತೊಂದು ಜಟಕಾ ಗಾಡಿ ಬಂತು ಮನೆ ಮುಂದೆ. "ಮತಿನ್ಯಾರಪ್ಪಾ........ಬರೋರೂ... ...." ಎಂದೆನ್ನುತ್ತಿರುವಂತೆಯೇ ತಿಳಿನಗೆಯ ಬಿಳೀ ಸೀರೆಯ ಬಿಳೀ ಮೆಟ್ಟಿನ, ಬಿಳೀ ಜೋಳಿಯ, ಕುಚ್ಚು ಬಿಳೀ ಹೂ ಕಾಕಡ ಮುಡಿದ ಧಡೂತಿಯ ಮಹಿಳಾಮಣಿಯೊಬ್ಬರು "ಇನ್ನು ನಿನ್ನ ಸರ್ತಿ ಕಣೆ ಈಗ—ನಿನ್ನ ಓಟು ಕೇಳೋಕೆ ಬಂದಿದಾರೆ........" ಎಂದು ಮೀನಾಕ್ಷಿಗೆ ಹೇಳಿದೆ. "ಬನ್ನಿ ಬನ್ನಿ ಒಳಕ್ಬನ್ನಿ ಚಾಪೆ ಮೇಲೆ ಬನ್ನಿ....ಬನ್ನಿ" ಎಂದು ಒಂದೇ ಸಮನೆ ಆಹ್ವಾನಿಸಿದಳು. ನಗುನಗುತಲಿದ್ದ ಆಕೆಯ ಬೆನ್ನಿನಿಂದ ಕೆಮ್ಮು ಪ್ರಾರಂಭವಾಯಿತು. ಇದೇನು ಈ ಪ್ರಾಣಿ ಬಾಯಲ್ಲಿ ನಗುತ್ತೆ ಬೆನ್ನಲ್ಲಿ ಕೆಮ್ಮುತ್ತದೆಯೇ? ಎಂದು ನಾನು ಬಗ್ಗಿ ನೋಡಿದೆ. ತಿಳಿತಿಳಿ ಕಣ್ಣು ಬಿಡುತ್ತಲಿದ್ದ ತೆಳ್ಳಂ ತೆಳುವಾದ ಶಿಂಗಳೀಕನ ಅಣ್ಣನಂತಿದ್ದ ಬಿದಿರು ಹೆಬ್ಬಾಕಾರದ (ಮಾರ್ಶ) ಮಾರುತಿಯೊಂದು ನಿಂತಿತ್ತು- ಬಂದ ಹೆಂಗಸಿನ ಹಿಡಿಂಬಾಕಾರದ ಹಿಂದೆಯೇ ನಡೆದು ಬಂದ ಈ ರಾಯ ಆಕೆಯ ಆಯಕಟ್ಟಿನ ಹಿರಿತನದಲ್ಲಿ ನಮ್ಮ ಕಣ್ಣಿಗೇ ಬೀಳಲಿಲ್ಲ. ಆತನನ್ನು ನಾನು ನೋಡಿ "ಬನ್ನಿ ಬನ್ನಿ... ಈ ಕಡೆ ಎಂದು" ಎದುರಿಗಿದ್ದ ಕುರ್ಚಿಯ ಕಡೆ ಕೈ ತೋರಿಸಿದೆ. ಹಲ್ಲು ಕಿರಿದು ಕುರ್ಚಿ ಕೂತಿತು. ಬಳಿಯ ಚಾಪೆ ಮೇಲೆ ಆ ಅಮ್ಮಾವರೂ ಅವರ ಬಳಿಯೇ ನಮ್ಮ ಅಮ್ಮಾ ಅವರೂ ಮಂಡಿಸಿದರು. ನನ್ನಾಕೆಯೇ ಕೆಮ್ಮಿ ಹೇಳಿದಳು "ಎಲ್ಲೋ ನೋಡ್ದಾಗಿದೆ ನಿಮ್ಮನ್ನು........"

"ಮೊನ್ನೆ ಬೇಬಿ ಷೋಗೆ ಅಧ್ಯಕ್ಷಿಣಿಯಾಗಿದ್ದೆ ನೋಡಿ ಅಲ್ಲಿರಬಹುದು.... ಅಥವಾ ಮೊನ್ನೆ ಪೇಪರಿನಲ್ಲಿ ಬಂದಿತ್ತಲ್ಲ.........ಅಲ್ಲಿ ನೋಡಿರಬಹುದು"

"ಪೇಪರಿನಲ್ಲಿ ಫೋಟೋ ಬಂದಿತ್ತೆ?"

"ಅಯ್ಯೋ ನೀವು ನೋಡಲಿಲ್ಲವೇನು........ನನ್ನ ಸ್ನೇಹಿತೆ ಅವರ ಯಜಮಾನರ ಜೊತೆ ಇಂಗ್ಲೆಂಡಿಗೆ ಹೋದರಲ್ಲ ಆಗ ಏರೋಡ್ರೋಮಲ್ಲಿ ತೆಗೆದ ಫೋಟೋದಲ್ಲಿ ಎಡಗಡೆಯಿಂದ ಐದನೇ ತಲೆಯೇ ನಂದಲ್ಲವೇ?" ಎಂದದ್ದು ಕೇಳಿ ನನಗೆ ನಗು ತಡೆಯಲಾಗಲಿಲ್ಲ. ಇಂಥ ಧಡೂತಿ ಆಳು ಆ ಚಿಕ್ಕ ಶ್ಯಾಮ

ರಾದಲ್ಲಿ ಹೇಗೆ ಹಿಡಿಸಿದಳು ಎಂದು ಆಶ್ಚರ್ಯವೂ ಆಯಿತು. ಮತ್ತೆ ಆ ಮಹ ತಾಯಿ ಮಾತಿಗೆ ಮೊದಲು ಮಾಡಿದಳು.

"ಇಲ್ದಿ ಇದ್ರೆ ಲೇಡೀಸ್ ಕ್ಲಬ್ ಸೆಕ್ರೆಟ್ರಿ ಶಿಲ್ಪಪಿಳ್ಳೆಮ್ಮನೋರ ಜೊತೆಲಿದ್ದಾಗ ನೋಡಿರಬೇಕು........"

"ಹೌದು ಹೌದು....ಆಗೇ ನೋಡಿದ್ದು" ಎಂದು ಸಧ್ಯ ಮೀನಾಕ್ಷಿ ಹೇಳಿದಳು. ಇಲ್ಲದಿದ್ದರೆ ಆಕೆಯ ಮುಖ ಇನ್ನೆಲ್ಲಿಲ್ಲಿ ಇತ್ತೆಂದು ಹೇಳುತ್ತಿದ್ದಳೋ ಏನೋ! ಆಕೆ ಹೇಳಿದಳು:

"ಮುಖ್ಯ ನಮ್ಮ ಧ್ಯೇಯವೆಂದರೆ- ಮಧ್ಯಮ ವರ್ಗದ ತ್ರಿಶಂಕುಗಳನ್ನು ಇಂದ್ರರನ್ನಾಗಿ ಮಾಡುವುದೇ ನಮ್ಮ ಯಜಮಾನರ ಧ್ಯೇಯ. ಶಾಸನ ಸಭೆಗೆ ಸ್ವತಂತ್ರ ಉಮೇದುವಾರರಾಗಿ ನಿಂತಿರುವುದನ್ನು ನಮ್ಮ ವ್ಯಾನುಗಳೂ ಪ್ರಚಾರ ಪಶುಗಳೂ ಸಾರುತ್ತಿರುವುದನ್ನು ನೀವು ಕೇಳಿರಬೇಕು....ತಮ್ಮ ಓಟು ನಮ್ಮವರಿಗೇ ಕೊಡಿ" ಇನ್ನೊಂದು ಇಸಮು ನನ್ನ ಓಟಿಗೆ ಗಂಟು ಬಿದ್ದದ್ದು ಕಡು ಕೋಪಗೊಂಡ ನನ್ನ ಕಂಡ ಮೀನಾಕ್ಷಿ ಕೈ ಸನ್ನೆ ಮಾಡಿ ಸುಮ್ಮಗಿರಿಸಿದಳು. ಸ್ವತಂತ್ರನಂತೆ ಸ್ವತಂತ್ರ—ತನ್ನ ಸ್ವತಂತ್ರ ತಾಳಿ ಕಟ್ಟಿದಾಕೆ ಕೈಗಿತ್ತು ಅತಂತ್ರನಾದ ಈ ಶಿಂಗಳೀಕನಿಗೆ ನಂಬರಾಗುವ ಹಂಬಲವೇಕೋ ಕಾಣೆ. ಈ ಮಹ ತಾಯಿಯ ಪೀಡನೆಗೆ ಸಿಕ್ಕು ಈ ಪ್ರಾಣ್ಯಾತ್ಮ ಅವಳ ಇಚ್ಛೆಯ ಮೇರೆಗೇ ಅತಂತ್ರನಾಗಿ ನಿಂತಿದ್ದು ಊಹಿಸಬಲ್ಲೆ. ನನ್ನ ಓಟು ಪೋಲಾದರೂ ಚಿಂತಿಲ್ಲ. ಈ ನರಪೇತಲನಿಗೆ ಕೊಡಕೂಡದೆಂದು ಸಂಕಲ್ಪ ಮಾಡುವಷ್ಟರಲ್ಲಿ ಮೀನಾಕ್ಷಿ ಆ ತನ್ನ ಸ್ವಜಾತಿಯ ಪಕ್ಷ ಸೇರಿ ಅವಳು ಓಟನ್ನು ಈ ಹಿಡಂಬಿಯ ಗಂಡನಿಗೇ ಕೊಡಲು ಭಾಷೆ ಇತ್ತಿದ್ದಳು. ನಾನು "ನೀವು ನಂಬರಾಗಿ ಬಂದರೆ ಏನು ಮಾಡುವಿರಿ?" ಎಂದು ಆತನನ್ನೇ ಕೇಳಿದೆ. ಹಿಂದುಮುಂದೆ ತೂಗಿ ತುಟಿ ನೆನೆಸಿಕೊಂಡು ಏನೋ ಯೋಚನೆಯಿಂದ ಥಟಮ್ಮನೆ ವಾಸ್ತವ ವಿಷಯ ಬಿದ್ದಂತೆ ಬೆಚ್ಚಿದ ಆತ."ಹಿಹಿಹಿ... ... ನಾವು ಜಮಾನಿಲ್ದ ಇರೋರಿಗೆ ಜಮಾನು ಕೆಲಸ ಇಲ್ದೆ ಇರೋರಿಗೆ ಕೆಲಸ.. ನಿದ್ರೆ ಇಲ್ದೇ ಇರೋರಿಗೆ ನಿದ್ರೆ... ...." ಎಂದೆನ್ನುವಷ್ಟರಲ್ಲಿ ಆತನ ಅರ್ಧಾಂಗಿ ಬಾಯಿ ಹಾಕಿ "ನಮ್ಮದು ಈಗಿರುವ ಎಲ್ಲಾ ರಾಜಕೀಯ ಸಂಸ್ಥೆಗಳ ಸುಗುಣಗಳನ್ನು ಆರಿಸಿ ಸೇರಿಸಿದ ಧ್ಯೇಯ" ಎಂದರು.

ಹಾಗಾದರೆ ನಿಮಗೆಷ್ಟು ಎಕರೆ ಜಮೀನಿದೆ?" ಎಂದೆ. ಆ ತದುಪ ಉಮೇದುವಾರ ತೊದಲುತ್ತಾ "ಶ್ರೀರಂಗಪಟ್ಟಣದಲ್ಲಿ ಐವತ್ತೆಕರೆ... .. ಚನ್ನಪಟ್ಟದಲ್ಲಿ ಸುಣ್ಣದ ಕಾರ್ಖಾನೆ, ತಿಪಟೂರಲ್ಲಿ ತೆಂಗಿನ ತೋಟ, ನಂಜನಗೂಡಲ್ಲಿ ರಸಬಾಳೆ ತೋಟಾ ಉಂಟು" ಎಂದು ಹೇಳಿದ. ಆಕೆಯೂ "ಏನೋ ದೇವರು

ಸುಮಾರಾಗಿ ಕೊಟ್ಟಿದ್ದಾನೆ" ಎಂದು ಸ್ವರ ಸೇರಿಸಿದಳು. ನಾನೇನಾದರೂ ಅನ್ನುವೆನೆಂದು ಮೀನಾಕ್ಷಿಗೆ ಗೊತ್ತು. ಕಣ್ಣು ಅರಳಿಸಿದಳು–ಚುಪ್ ಎಂದಳು. ನಾನು ಬಿಟ್ಟೇನೇ—" Charity begins at home ಅಂತ ನಿಮ್ಮ ಜಮೀನೆಲ್ಲಾ ಮೊದಲು ನಿಮ್ಮ ಉಳೋ ರೈತರಿಗೆ ಹಂಚಿ–ಹಾಗೇ ಮಾಡ್ತೀನಂತ ಹೇಳಿ ಓಟು ಕೇಳಿದರೆ ಕೊಡೋರಿಗೆ ನಂಬ್ಕೆ ಹೆಚ್ಚಾಗಿ ಖಂಡಿತಾ ಓಟು ಕೊಡುತ್ತಾರಲ್ವೇ?" ಎಂದೆ. ಹೆಣ್ಣು ಗಂಡಗಳಿಬ್ಬರೂ ತಬ್ಬಿಬ್ಬಾದರು. ಏನು ಹೇಳಲೂ ತೋಚದೆ "....ಬೆಬ್ಬೆಬ್ಬೆ .. ಹಿಹಿಹಿ....ಬಬ ಬರ್ತೀನಿ" ಎಂದು ಕುಂಕುಮದ ಭರಣಿ ಹಿಡಿದ ಮೀನಾಕ್ಷಿಗೆ "ಹೋಗಿ ಬರ್ತೀನಿ" ಕೂಡ ಹೇಳದೆ ಜಟಕಾಕ್ಕೆ ಹಾರಿ "ಜೋರಾಗಿ ಹೊಡಿ ಸಾಬು" ಎಂದು ಹೊರಟು ಹೋದರು. ಮೊದಲೇ ರೇಗಿಸಿದ ನಾನು ಮೀನಾಕ್ಷಿಯನ್ನು ತರಾಟೆಗೆ ತೆಗೆದುಕೊಳ್ಳಲು ನಿಶ್ಚಯಿಸಿ "ಅಡಿಗೇಗಿಡೇಲೇ ........ಹನ್ನೊಂದಾಯ್ತು ಸಾಕಾಯ್ತು ಈ ಓಟಿನವರ ಕಾಟ" ಎಂದು ಹಾರಾಡಿದೆ ಇನ್ನು ಯಾರು ಇವತ್ತು ಬಂದರೂ ನಾನು ತಿನ್ನುವುದು ನಿಶ್ಚಯವಾಯಿತು. ಇಷ್ಟರಲ್ಲಿ ಧ್ವನಿವರ್ಧಕ ಹೊತ್ತ ಕಾರೊಂದು ಚೀರುತ್ತಾ ತಮ್ಮ ಉಮೇದುವಾರರ ಧ್ಯೇಯದ ಹೋರಾಟದ ವರ್ಣನೆ ಕಿವಿ ಮರ್ಧನ ಮಾಡುತ್ತಾ ಬಂದಿತು. ನನ್ನ ಮನೆ ಮುಂದೆ ಅರ್ಧ ತಾಸು ಆ ಸಂಸ್ಥೆಯ ಘನೋದ್ದೇಶದ ನಿರರ್ಗಳ ಉತ್ಪ್ರೇಕ್ಷೆ ಸಾಗಿತು. ನನಗೆ ತಲೆ ತಿರುಗಿ ರಜೀಕು ಇಲ್ಲದಿದ್ದರೆ ಹಾಗೆ ವರಾಂಡದಲ್ಲಿ ಧಡಭಡನೆ ಅತ್ತಿಂದಿತ್ತ ಓಡಾಡುತ್ತಿದ್ದೆನೇ? ಮತ್ತೊಂದು ಕಾರು ಬಂತು–ಅದರೊಳಗಿಂದ ವ್ಯಕ್ತಿ ಬಂತು .......ನೇರವಾಗಿ ಹೋಗಿ "....ಮಹರಾಯ ಹೊರಡು....ನಿನಗೇ ನನ್ನ ಓಟು ಬಿಸಾಕ್ತೀನಿ. ನನ್ನ ಮನೆಗೆ ಮಾತ್ರ ಕಾಲಿಡಬೇಡ...." ಎಂದು ಬೈದು ಆತನನ್ನು ದಬ್ಬಿಬಿಟ್ಟೆ.

"ಇಂಥ ಕೊಬ್ಬೇನ್ರೀ ನಿಮಗೆ....ಹೋಗಲಿ ಪಾಪ ಮನೇಲೇ ವಿಷಯ ಹೇಳೋಣಾಂತ ಬಂದ್ರೆ....ಏನೋ ಎಗರಲಾಡ್ತಾರೆ....ಹೋಗಯ್ಯ ಹೋಗಯ್ಯ... ಪಾಪ ಹೋಗಲೀಂತ ಇನ್ಕ್ರಿಮೆಂಟ್ ಜೊತೆಗೆ ನಿನಗೆ ಬೇಕಾದ ನಿನ್ನ ಜಾನಕಲ್ಲಿಗೇ ವರ್ಗಾ ಮಾಡಿಸಿದೇನೆಂತ ಹೇಳೋಕೆ ಬಂದ್ರೆ ನನ್ನೆ ನಡೀಂತೀಯಾ...... ಉಪಕಾರ ಮಾಡಬಾರ್ದು ಈ ಕಾಲ್ದಲ್ಲಿ ಈಗ್ಲೇ ಹೋಗಿ ಎರಡನ್ನೂ ಕ್ಯಾನ್ಸಲ್ ಮಾಡ್ತಿನಿ...." ಎಂದು ನನ್ನ ಮೇಲೆ ದಯಗೊಂಡಿದ್ದ ಸಾಹೇಬರು ರೇಗಿಬಿದ್ದು ಹಾರಿ ಕಾರಲ್ಲಿ ಕೂತು ಬರ್ನೆ ಹೋಗಿದ್ದು ತಲೆ ತಿರುಗಿ ಕುಸಿಯುತ್ತಿದ್ದ ನನಗೆ ಮುರುಕು ಮುಸುಕಾಗಿ ಕಂಡಿತು.

ಮತ್ತೆ ನಾನೆದ್ದಾಗ ಆಸ್ಪತ್ರೆ ಮಂಚದಲ್ಲಿ ಮಲಗಿದ್ದು ಗೊತ್ತಾಯಿತು.

—ದಾಶರಥಿ ದೀಕ್ಷಿತ್.

## ಬೂತಿನ ಮುಂದೆ

ಹತ್ತಾರು ದಾರಿಗಳು ಕವಲೊಡೆದು ಕರೆಯುತಿವೆ.
ಎತ್ತಲೂ ಕಾಲೆತ್ತಿ ನಡೆಯಲಾರೆ ..............

ರಾಮರಾಜ್ಯದ ಧಾನಿ ಸಾಕೇತ ಪುರಿಗೊಂದು,
ವಾಮರಾಜ್ಯದ ಧಾನಿ ಮಾಸ್ಕೋವಿಗೊಂದು;
ಸಾಮ ಮಾರ್ಗದಿ ಸಮತೆಯನ್ನಿಳಿಸಿ ತಂದು
ಕ್ಷೇಮ ರಾಜ್ಯವ ತರುವ ಅಟ್ಲಿ ಮನೆಗೊಂದು;

ಶ್ಯಾಮ ನಾನೆಂದೆನುವ ಮೂಕರ್ಜಿ ಮನೆಗೊಂದು,
ಭೀಮರಾವಂಬೇಡ್ಕರ್ ಬಂಗಲಿಗದೊಂದು,
ನಾಮಧಾರಿಯೆಂಬನಾಮಧೇಯರದೊಂದು,
ಸ್ವಾಮಿದ್ರೋಹದ ಮನೆಗೆ ನೂರು ಮತ್ತೊಂದು;

ಆ ಮಹಾತ್ಮನ ಮಾರ್ಗಕಡ್ಡವಾಗಿಹುದೊಂದು,
ಈ ಮಹಾ ಭೇತಾಳ ಪಾತಾಳಕೊಂದು,
ಕಾಮಿಗಳ ಹೆದ್ದಾರಿ, ಕುಹಕಿಗಳು ಬಂದು
ಕೋಮಿಶಾರ್ಥವ ಗಳಿಪ ದಾರಿ ನೂರೊಂದು;

ಹತ್ತಾರು ದಾರಿಗಳು ಕವಲೊಡೆದು ಕರೆಯುತಿವೆ,
ಎತ್ತಲೂ ಕಾಲೆತ್ತಿ ನಡೆಯಲಾರೆ................

—ರೇವಣ್ಣ.

---

### (ಓಟು ಕೇಳುವವನು — ಕೊಡುವವನಿಗೆ)

ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ· ಓ ಎನ್ನಲಾಗದೆ ಅಯ್ಯಾ! ಒಂದೇ ಒಂದು ಓಟು ಕೊಡುವೆನೆಂದು ತಲೆ ಹಾಯಿಸಯ್ಯಾ-ಅದೇ ಎನಗೆ ಸಾಕಯ್ಯಾ ಯಾವಾಗಲೂ ನಿಮ್ಮವ ಕರೆವುತ್ತಿದ್ದೇನೆ "ಓ" ಎನ್ನದೆ ಮೌನವೇಕೆ............ಓಟಯ್ಯಾ!

ನಾದ ಪ್ರಿಯನಲ್ಲ, ವೇದ ಪ್ರಿಯನಲ್ಲ
ಭಕ್ತಿ ಪ್ರಿಯನಲ್ಲ....ನಮ್ಮ ರಾಯ
ಓಟಿನ ಪ್ರಿಯ ...ಅದುವೆ ಅವನಿಗೆ ಪ್ರೀತಿ
ಅದುವೆ ಅವನಿಗೆ ಸಗ್ಗವಯ್ಯ............

# ಭೂಂ ಭೂಂ

---

ಭೊಂ ಭೊಂ ಎಂಬುದೂ ಒಂದು ಭಾಷೆ. ಅದರಲ್ಲೂ ನೂರಾರು ಮಾತುಗಳ ಕೋಶವಿದೆ; ಪ್ರಶ್ನೋತ್ತರಗಳಿವೆ; ಅದನ್ನೂ ಉಜ್ವಲವಾಗಿ, ಸ್ಫೂರ್ತಿದಾಯಕವಾಗಿ, ಹೃದಯವಿದ್ರಾವಕವಾಗಿ, ಸರಳವಾಗಿ, ಕಬ್ಬಿಣದ ಕಡಲೆಯಾಗಿ ಉಚ್ಚರಿಸಬಹುದು. ಉಚ್ಚರಿಸುತ್ತಿದ್ದಾರೆ........ಯಾರು? ಬಸ್ ಡ್ರೈವರುಗಳು. ಯಾವುದರ ಮೂಲಕ? ಹಾರ್ನುಗಳ ಮೂಲಕ.

ಈ ಭಾಷೆಯನ್ನೂ ಅದರಲ್ಲಿ ನುರಿತ ಭಾಷಣಕಾರರಾದ ಡ್ರೈವರ್ ಮಹಾಶಯರನ್ನೂ ನಾನು ಮೊನ್ನೆ ಚೆನ್ನಾಗಿ ಪರಿಚಯ ಮಾಡಿಕೊಂಡೆ— ಸುಮಾರು ೬೫ ಮೈಲಿ ಬಸ್ ಪ್ರಯಾಣ ಒಂದರ ಮೂಲಕ.

ಹಾರ್ನಿನ ಚೀಲ ಒತ್ತುವುದೇ ಭಾಷೋತ್ಪತ್ತಿಗೆ ಮೂಲ. ಭಾಷೆ ಭಾವವನ್ನು ಪ್ರತಿಭೊಂಬಿಸುತ್ತದೆ. ಒತ್ತಿನ ಒತ್ತಡ, ಒಂದು ಒತ್ತಿಗೂ ಇನ್ನೊಂದು ಒತ್ತಿಗೂ ಇರುವ ಬಿತ್ತರ ಇವುಗಳೇ ವಿವಿಧ ಮಾತುಗಳನ್ನು ನಿರ್ಧರಿಸುವ ಸಾಧನ.

ಡ್ರೈವರನ ಹತ್ತಿರದ ಹಾರ್ನಿಂದ ಹೊರಡುವ ಶಬ್ದಜಾಲವೆಲ್ಲವೂ ಒತ್ತಕ್ಷರಗಳೇ.

ನೀವೂ ಬೇಕಾದರೆ, ನಾಳೆ ಪರೀಕ್ಷಿಸಬಹುದು. ಪೋಲೀಸಿನವನ ರುಜು ಪಡೆದು, ಅರ್ಧ ಗಂಟೆ ತಡವಾದ ಕೂಡಲೇ, ಬಸ್ಸು ಹೊರಟು ಪೆಟ್ರೋಲ್ ಪಂಪಲ್ಲಿ ನಿಂತು, ಇನ್‌ಸ್ಪೆಕ್ಟರ್ ಮನೆಗೆ ಹೋಗಿ, ಅಲ್ಲಿಂದ ಸಾಹುಕಾರರ ಗಲ್ಲಿಗೆ ಬಿದ್ದು, ಮೇಲೆ ಬೀದೀಲಿ ಸಾಮಾನು ಹೇರಿ, ಹೋಟಲು ಮುಂದೆ ನಿಂತು ಎಲ್ಲರಿಗೂ ಕಾಫಿ ಕುಡಿಸಿ, ಅಲ್ಲಲ್ಲಿ ನಿಂತು ಬ್ರೆಡ್ ಅಂಗ್ಡಿಯಿಂದ ಬ್ರೆಡ್ಡು, ಪೇಪರಂಗ್ಡಿಯಿಂದ ಪೇಪರು, ಹೂವು ಹಣ್ಣು, ಡಾಕ್ಟರೌಷಧಿ ಇವೆಲ್ಲವನ್ನೂ ದಾರಿಯ ದೊಡ್ಡ ಮನುಷ್ಯರಿಗಾಗಿ ಡ್ರೈವರನು ಶೇಖರಿಸಿ, ಊರಾಚೆ ಹೊರಡುತ್ತದೆ, ದಿನವೂ. ಹೊರಟೆ, ನಿಲ್ಲುತ್ತೇನೆ, ತೆಕ್ಕೊಂಡು ಬಾ, ತಡ ಮಾಡಬೇಡ, ಹೊತ್ತಾಯಿತು, ಆಯಿತೆ, ಹೊರಡಲೆ, ಇತ್ಯಾದಿ ತರತರದ ಮಾತಿಗೆಲ್ಲ ಭುಂ, ಭೊಂ, ಭುಂ, ಭುಂ, ಭುಂ, ಭೂಂ ಎಂದು ನಯದಿಂದ, ನವಿರಾಗಿ, ಕಟುವಾಗಿ, ಸುಟಿ

ಯಾಗಿ ಬಹು ರೀತಿಯ ಚಮತ್ಕಾರದಿಂದ ಚೀಲವ್ರೊತ್ತಿ ಡ್ರೈವರನು ನುಡಿಸು ತ್ತಾನೆ, ನೀವು ಕೇಳಿ ಬೆರಗಾಗಬಹುದು ಅವನ ಕೈ ಚಳಕಕ್ಕೆ.

ದಾರಿ ಉದ್ದಕ್ಕೂನು ಅಷ್ಟೆ. ಸೀಟಿಲ್ಲ, ಎಂದು ಹಾರ್ನಿಂದಲೇ ನುಡಿಸು ತ್ತಾನೆ. ಬೇಗ ಬನ್ನಿರಪ್ಪಾ ಎಂದು ಅದರ ಮೂಲಕವೇ ಬೇಡಿಕೊಳ್ಳುತ್ತಾನೆ; "ಇವತ್ತು-ಈ ದಾರಿಯ ಮೂಲಕ .. ಐಜಿ ಸಾಹೇಬರು....ಬರಬಹುದಾದ್ದರಿಂದ ಓವರ್ ಲೋಡಿಂಗ್ ಸಾಧ್ಯವಿಲ್ಲದೆ ಇರುವುದಕ್ಕಾಗಿ ವಿಷಾದಿಸುತ್ತೇನೆ" ಎಂಬ ಇಷ್ಟನ್ನೂ ಹಾರ್ನ್ ಭಾಷೆಯ ಒತ್ತಕ್ಷರದಿಂದಲೇ ಪ್ರಕಟಿಸಬಲ್ಲ ಡ್ರೈವರೊಬ್ಬ ನನಗೆ ಮೊನ್ನೆ ದೊರೆತಿದ್ದ.

ಇಂಥ ಭಾಷೆಯನ್ನು ಗಾಳಿಗೆ ತೇಲಿಸುವ ಹಸ್ತಕುಶಲರು ನಮ್ಮಲ್ಲಿ ನೂರಾರು ಜನ ಇರುವರು. ಆದರೆ, ಅವರಿಗೆ ನಾವು ಕೊಡುವ ಮನ್ನಣೆಯಾ ದರೂ ಏನು? ಅದನ್ನು ಕೇಳಿ ಆನಂದಿಸುವ ಕಿವಿಗಳೂ ಕಿರಿದಾಗುತ್ತಿವೆ— ಇದೇ ಶೋಚನೀಯ.

—ಶಾಮುಹ್.

———o———



ಅವಳ-ಜವಳಿಗೆ-"ಆ ಕಸಕಟ್ಟಿ ಸೀಬೇಕಾಯಿ ತಿನ್ನಬೇಡಾ ಅಂದರೆ ತಿಂದೆಯಲ್ಲಾ- ಈಗ ನೋಡು ನನಗೆ ಹೊಟ್ಟೆನೋವು ಬಂದಿದೆ."

# ರೇಷನ್ ಕಾಲದ ಕೋಗಿಲೆ

ಅಕಾಲಕ್ಕೆ ತುಂಬ ಕಾಯ್ಬಿಟ್ಟಿತ್ತು
ನಂ ಮಾವಿನ ಮರ
ಕೋಗಿಲೆಯೊಂದು ಕಿರಚ್ಕೋತಿತ್ತು
ಏನ್ಬಂದಿತ್ತೋ ಬರ!

ಮರದಲ್ಬಿಟ್ಟಿತ್ತು ತುಂಬಾ ಕಾಯಿ
ಹದ್ನೈದ್ ದಿನಗಳ ಹಿಂದೆ
ತಿನ್ಬಾರ್ದೂಂತ ಹೇಳಿ-ನಂತಾಯಿ
ಕಿತ್ತು ಮಾರಿಸಿದ್ದರು ಅಂದೇ !

ಈಗೇನಿದೆ ಬರೀ ಎಲೆ,
ಕಾಯೊಂದಾದ್ರೂ ಗುರ್ತಿಲ್ಲ
ಈಗ ಬಂದಿದೆ ಕೋಗಿಲೆ
ತಿನ್ನೋಕೇನೂ ಇಲ್ಲ

ಬರೀ ಎಲ್ಬು ಗೂಡು, ಚರ್ಮ
ಕೋಗಿಲೇಗಿಲ್ಲ ತಿನ್ನೋಕೆ
ಅದೇ ಇರ್ಬೇಕು ಹಾಡಿನ್ಮರ್ಮ
ಬಂದಿದೆ ಇಲ್ಲಿ ಸಾಯೋಕೆ.

ಹಿಂದಿನ ಕಾಲಕ್ಕೆ ಕಾಯಿರ್ತಿತ್ತು
ನಮ್ಮನೆ ಮಾವಿನ ಮರ್ದಲ್ಲಿ
ಈ ಸಲ ಅಕಾಲಕ್ಕೆ ಬಿಟ್ಬಿಡ್ತು
ತಿನ್ನೋಕೇನಿದೆ ಈಗಲ್ಲಿ ?

ಹಿಂದೆ ಒಳ್ಳೆ ಹಾಡ್ಹೇಳಿತ್ತು
ಚೆನ್ನಾಗಿ ಮೇದು ಕೋಗಿಲೆ
ರೇಷನ್ ಕಾಲ ಬಂದೇಬಿಡ್ತು
ಬಡವಾಗ್ಬಿಟ್ಟಿದೆ ಕೋಗಿಲೆ

ಬರೀ ಬರಡು ಅದರ ಹಾಡು
ತಿನ್ನೋಕಿಲ್ಲ ಕೋಗಿಲೆಗೂ
ರೇಷನ್ ಕಾಲ ಅಲ್ವೇ ಇದು
ನಮ್ಗೆ, ಪ್ರಾಣಿ. ಹಕ್ಕಿಗಳ್ಗೂ.

— ತಿರು. ಶ್ರೀರಂಗ.

# ಎಲೆಕ್ಷನ್ ಗಾದೆಗಳು

—

"ವೋಟಾ"ತುರಾಣಾಂ ನ ಸುಖಂ ನ ನಿದ್ರಾ.

* * *

ವೋಟಾತುರಾಣಾಂ ನ ಭಯಂ ನ ಲಜ್ಜಾ!

* * *

ವೋಟು ಕೊಡ್ತೀನೀಂತ ನೋಟು ಕಸ್ಕೊಂಡ.

* * *

ಚುನಾವಣೇಲಿ ಸೋತು ಬಡಾವಣೇನ ಬಿಟ್ಹಾಗೆ.

* * *

"ವೋಟು" ಕೊಡಿ ರಾಯ್ರೇ ಅಂದ್ರೆ ನಿಂತಿರೋರು ಎಷ್ಟು ಮಂದಿ ಅನ್ನೋದೆ.

* * *

ಎಕ್ಸಾಮಿನೇಷನ್‌ಗೆ ಕುಂತು ನೋಡು, ಎಲೆಕ್ಷನ್‌ಗೆ ನಿಂತು ನೋಡು.

* * *

ಓಟೂ ಚೆನ್ನ — ಬೇಟೇನೂ ಚೆನ್ನ.
—ಆದರೆ ಓಟನ ಬೇಟಿ ಚೆನ್ನಾನೆ?

* * *

ಹೊತ್ತಲ್ಲದ ಹೊತ್ತಿನಲ್ಲಿ ತೊತ್ತಿ ಓಟು ಕೊಡಲಿಕ್ಕೆ ಹೋದಳಂತೆ.

* * *

ಒಬ್ಬನಿಗೆ ಓಟು ಕೊಡ್ತೀನಂದೋನು ಯೋಗಿ, ಇಬ್ಬರಿಗೆ ಹ್ಞೂ ಅಂದೋನು ಭೋಗಿ, ಮೂವರಿಗೆ ಹ್ಞೂ ಅಂದೋನು ರೋಗಿ, ಎಲ್ಲರಿಗೂ ಹ್ಞೂ ಅಂದೋನ್ನ ಹೊತ್ಕೊಂಡುಹೋಗಿ.





VITOFERRIN



TRADE MARK

MYSORE INDUSTRIAL & TESTING LABORATORY LTD MALLESWARAM BANGALORE

# ವೈಟೋಫೆರಿನ್

(ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಕಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

ಮಲ್ಲೇಶ್ವರಂ - - - ಬೆಂಗಳೂರು 3.

ಸಂಕ್ರಾಂತಿ ಹಬ್ಬಕ್ಕಾಗಿ 11-1-1952 ರಿಂದ

ಅಮೋಘ ಪ್ರಾರಂಭ

ಬೆಂಗಳೂರು ಗೀತಾ, ಸೂಪರ್ ಮತ್ತು ಶ್ರೀ (ಸಿವಿಲ್ ಏರಿಯಾ)

ಮೈಸೂರು ಚಾಮುಂಡೇಶ್ವರಿ ಮತ್ತು ಮೋತೀಲಾಲ್ ಟಾಕೀಸ್

ದಾವಣಗೆರೆ ಮೋತಿ ಟಾಕೀಸ್‌ಗಳಲ್ಲಿ

ಬಹು ದಿನಗಳಿಂದಲೂ ನಿರೀಕ್ಷಿಸುತ್ತಿದ್ದ ವಾಹಿನಿಯವರ ನವರಸಭರಿತ

ಜನಮೆಚ್ಚಿನ ಚಿತ್ರ



# ಮಲ್ಲೇಶ್ವರಿ-Malleswari

(ತೆಲುಗು) (Telugu)

ಪಾತ್ರ: ಎನ್. ಟಿ. ರಾಮರಾವ್, ಭಾನುಮತಿ

ಡೈರೆಕ್ಟರ್: ಬಿ. ಎನ್. ರೆಡ್ಡಿ ಸಂಗೀತ: ಎಸ್. ರಾಜೇಶ್ವರರಾವ್

—A RAJSHRI RELEASE

REG. No. M. 4718 KORAVANJI JAN. 1952

28-12-1951 ರಿಂದ ಪ್ರದರ್ಶಿಸಲ್ಪಡುತ್ತಲಿದೆ

ಎ. ವಿ. ಯುಂ. ರವರ

# ಬಹಾರ್

(ಹಿಂದಿ)



ವೈಜಯಂತಿಮಾಲಾ, ಕರನ್ ದಿವಾನ್, ಓಂಪ್ರಕಾಶ್
ಮುಂತಾದವರು

ಬೆಂಗಳೂರು ಮಂಗಳೂರು

ಸಾಗರ್  ರೂಪವಾಣಿ

ಚಿತ್ರಮಂದಿರಗಳಲ್ಲಿ

ಶೀಘ್ರದಲ್ಲಿಯೇ ನಿರೀಕ್ಷಿಸಿರಿ:

ಮೈಸೂರು ರಣಜಿತ್ ಟಾಕೀಸ್‌ನಲ್ಲಿ

A TALLAM RELEASE

Printed by B. S. Iyengar, Bangalore City
Publisher—B N. Gupta. Editor—M. Sivaram